ಅರವಿಂದ ಗ್ರಂಥ ಮಾಲೆಯ ೨ನೆಯ ವರುಷದ

ಕಮಲ ೩

---

# ಬೆಳಗು

(ಕಾಳರಾತ್ರಿಯ ಕೊನೆಯ ಭಾಗ)



**" ಮಧುರಚೆನ್ನ "**

ಜುಲೈ ] ಹನ್ನೆರಡಾಣೆ [ ೧೯೩೭

ಪ್ರಕಾಶಕರು :—

ಬಿ. ಡಿ. ಅಕ್ಕಿ ಬಿ. ಎ. ಎಲ್ ಎಲ್. ಬಿ.

" ಅರವಿಂದ ಗ್ರಂಥಮಾಲಾ "

ಹಲಸಂಗಿ ( ಜಿಲ್ಹಾ-ವಿಜಾಪುರ )



ಸಂಪಾದಕರು :—

" ಮಧುರಚೆನ್ನ "



ಮುದ್ರಕರು :—

ಶೇಷಗಿರಿರಾವ ಗೋವಿಂದರಾವ ಕುಲಕರ್ಣಿ

ಸಾಧನ ಮುದ್ರಣಾಲಯ

ಧಾರವಾಡ

ಓಂ

## ಅರ್ಪಣ

ನನ್ನ ಜೀವನದ

ಕುರುಡ ಶಕ್ತಿಗೆ

ಕಣ್ಣು ಕೊಟ್ಟ

**ಅಣ್ಣಾ ಬೇಂದ್ರೆಯವರಿಗೆ**

— ಮಧುರಚೆನ್ನ

ಓಂ ಶ್ರೀ ಓಂ

**AUM**



## ನಮ್ಮ ಮಾತು

ಈ ಪುಸ್ತಕಕ್ಕೆ ಸಂಬಂಧಿಸಿದ "ಪೂರ್ವರಂಗ" ಮತ್ತು "ಕಾಳ ರಾತ್ರಿ" ಗಳು "ಜಯಕರ್ನಾಟಕ ಗ್ರಂಥಮಾಲೆ" ಮತ್ತು "ಮನೋಹರ ಗ್ರಂಥಮಾಲೆ" ಗಳಲ್ಲಿ ಈ ಮೊದಲೇ ಪ್ರಕಟವಾಗಿ ಬಹಳ ದಿನಗಳಾದವು. ಮೂರನೆಯದಾದ ಈ "ಬೆಳಗು" ಎಂಬ ಪುಸ್ತಕವನ್ನು ಈಗ ನಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸಿದ್ದೇವೆ. "ಪೂರ್ವರಂಗ" ಮತ್ತು "ಕಾಳರಾತ್ರಿ" ಪುಸ್ತಕಗಳನ್ನು ಓದದವರು ಒಮ್ಮೆಲೆ ಈ ಪುಸ್ತಕವನ್ನು ಓದತೊಡಗಿದಾಗ ಕಥೆಯ ಅತಂತ್ರತೆಯ ಬಗ್ಗೆ ದಿಗಿಲುಗೊಳ್ಳಬಹುದು. ವಾಚಕರಿಗೆ ಆ ತೊಂದರೆಯುಂಟಾಗ ಬಾರದೆಂದು ಆ ಎರಡು ಪುಸ್ತಕಗಳ ಸಾರಾಂಶವನ್ನು ಸ್ವಲ್ಪದರಲ್ಲಿ ಮೊದಲು ಕೊಟ್ಟಿದ್ದೇವೆ. ಈ ಪುಸ್ತಕವನ್ನು ಓದುವ ಮೊದಲು ಆ ಕಥಾ ಸಾರಾಂಶವನ್ನು ಓದಬೇಕಾಗಿ ವಾಚಕರಲ್ಲಿ ಬಿನ್ನಹಗಳು.

ಇನ್ನೊಂದು ಮಾತೇನೆಂದರೆ:—ಶ್ರೀ. ಕಾರಂತರ "ಹೇಗಾದರೇನು" ಎಂಬ ಪುಸ್ತಕದ ನಂತರ "ಅವ್ಯಕ್ತ" ವೆಂಬ ಪುಸ್ತಕವನ್ನು ಕೊಡುತ್ತೇ ವೆಂದು ಪ್ರಕಟಿಸಿದ್ದೆವು. ಸಕಾಲಕ್ಕೆ ಅದರ ಪರವಾನಿಗೆಯು ಬರಲಿಲ್ಲ ವಾದ್ದರಿಂದ ಈ ಸಾರೆ ಪ್ರಕಟಿಸುವದಾಗಲಿಲ್ಲ. ಆ ಬಗ್ಗೆ ವಾಚಕರು ಮನ್ನಿಸಬೇಕಾಗಿ ಬೇಡಿಕೊಳ್ಳುತ್ತೇವೆ. ಈಗ ಸರ್ ಜಗದೀಶ ಚಂದ್ರರಿಂದ ಆ ಪುಸ್ತಕದ ಪರವಾನಿಗೆ ಬಂದಿದೆ. ನಮ್ಮ ಮಾಲೆಯು ಈ ವರುಷ ಮುಗಿಯುವದರೊಳಗಾಗಿ ವಾಚಕರ ಕೈಗೆ ಅದನ್ನು ಈಯದಿರಲಾರೆ ವೆಂದು ವಿಶ್ವಾಸದಿಂದ ಹೇಳುವೆವು.

ಮತ್ತೂ ಒಂದು ಮಾತೇನೆಂದರೆ:— "ಪೂರ್ವರಂಗ" ವೆಂಬ ಪುಸ್ತಕದ ಪ್ರತಿಗಳೆಲ್ಲಾ ಈಗಾಗಲೇ ತೀರಿಹೋಗಿವೆ. ಬೇಗನೆ ನಮ್ಮ ಮಾಲೆಯ ಬಿಡಿಮುತ್ತಾಗಿ ಅದನ್ನು ಹೊರಡಿಸುವೆವೆಂದು ತಿಳಿಸಲು ನಮಗೆ ಸಂತೋಷವೆನಿಸುತ್ತದೆ.

ಇಂತು ತಮ್ಮ,

**ಪ್ರಕಾಶಕ**

# ಮುನ್ನುಡಿ

ಶಾಂತಿಯಿಂದ ಆನಂದಕ್ಕೆ ಅಲಕ್ಕನೆ ಜಿಗಿಯಲು ಬರುವದಿಲ್ಲ. ಇಟ್ಟ ಗರ್ಭವು ನೆಲೆಹಿಡಿದು ನಿಲ್ಲಬೇಕು, ಬೆಳೆಯಬೇಕು; ಅದಕ್ಕೆ ಕಾಲವು ಬೇಕು. ಹಾದಿಯಲ್ಲಿ ಕುತ್ತುಗಳಿವೆ. ಸ್ವಾತ್ಮ ಶಾಂತಿಯು ಸರ್ವಾತ್ಮ ಪ್ರೇಮದಲ್ಲಿ ಮಾಗದಿದ್ದರೆ ಪರಮಾತ್ಮನ ಆನಂದಕ್ಕೆ ಬೇರೆ ಹಾದಿಯಿಲ್ಲ. 'ಕಾಳರಾತ್ರಿ' ಯಲ್ಲಿ ಶಾಂತಿಯು ಸ್ಥಾಯಿಯಾಗಿ ನಿಂತು ಕರುಣೆಯ ಕುರುಹುಗಳನ್ನು ಕಂಡು ಪ್ರೇಮದ ಪಾಠಗಳನ್ನು ಕಲಿಯಲು ಹವಣಿಸುತ್ತಿದೆ. ಕಾಳರಾತ್ರಿಯು ಓಸರಿಸಿ ನಸುಕು ಹರಿಯಲಿದೆ.

ಇಂಥ ಪುಸ್ತಕಗಳ ಪ್ರಯೋಜನವೇನು ? ಎಂದು ಕೇಳುವ ಜನರೂ ಇದ್ದಾರೆ. ಕನ್ನಡ ಅಭಿನವ ಸಾಹಿತ್ಯದಲ್ಲಿ ಈ ಬಗೆಯ ಬರೆವಣಿಗೆಯೂ ಒಂದು ಭೂಷಣವಾಗಿದೆ. ಇದು ಸತ್ಯ ಸಾಹಿತ್ಯ. 'ಕಾಳರಾತ್ರಿ' ಯ ಶೈಲಿಯಲ್ಲಿ ಒಂದು ಪ್ರಭಾವವಿದೆ, ವೈಭವವಿದೆ; ವರ್ಣನೆಗಳಲ್ಲಿ ಸೊಗಸಿದೆ; ವಿಚಾರಗಳನ್ನು ಸಂಕ್ಷೇಪವಾಗಿಯೂ ವಿಸ್ತಾರವಾಗಿಯೂ ಮಂಡಿಸುವಲ್ಲಿ ಜಾಣ್ಮೆಯಿದೆ, ಜೋಕೆಯಿದೆ; ಎಲ್ಲೆಲ್ಲಿಯೂ ಪ್ರಾಮಾಣಿಕತೆಯು ಹೊರಸೂಸುತ್ತಿದೆ, ನಟನೆಯಿಲ್ಲ; ಹಗರಣವಿಲ್ಲ. ಇಲ್ಲಿಯ ವಾಸ್ತವತೆಯಲ್ಲಿ ಪ್ರಸನ್ನ ಗಂಭೀರತೆಯು ಅಲ್ಲಲ್ಲಿ ನೀಡಿಕೊಂಡಿದೆ. ಸಾಹಿತ್ಯ ದೃಷ್ಟಿಯಿಂದ ಕೂಡ ಇದು ಬೇಕಾದ ಪುಸ್ತಕವು.

ಬರೆದವರೇನು ಮಹಾ ಅನುಭಾವಿಗಳೋ ? ಎಂದು ದರ್ಪದಿಂದ ದಿಟ್ಟಿಸಿ ಕೇಳೂ ಬಹುದು. 'ಅಂಥವರ ಶಿಶು' ಎಂದು ಬರೆದವರೇ ಹೇಳಿದ್ದಾರೆ. ಇದು ವಿನಯವಲ್ಲ; ಸತ್ಯ. ಅಂತೂ ಮೇಲಿನ ಜಾತಿಗೆ ಸೇರಿದವರು ಎನ್ನಿ—ಎಂದು ಕೆಣಕಿ ಕೇಳಬಹುದು. ಮೇಲೋ—ಕೀಳೋ ಅದು ಜನರು ಕೊಡಬೇಕಾದ ಬೆಲೆ. ಅವರು ತಮ್ಮ ಜೀವದ ರೀತಿಯನ್ನು ಜಗದ ಮುಂದಿಟ್ಟಿದ್ದಾರೆ. ಸಂತೆಯಲ್ಲಿ ಮನೆಯನ್ನು ಕಟ್ಟಿ ಶಬ್ದಕ್ಕೆ ಹೆದರುವ ಸ್ವಭಾವದವರೇನೂ 'ಮಧುರಚೆನ್ನ'ರಲ್ಲ. ಅನುಭವವಿಲ್ಲದೆ ಶಾಸ್ತ್ರವು ಉಪಯೋಗಕ್ಕೆ ಬಾರದು ಎಂದು ಅವರೇ ಸಾರುತ್ತಿರುವಾಗ

ಅವರೀ ಗ್ರಂಥದಿಂದ ಕ್ರಾಂತಿಯಾದೀತೆಂದು ಅವರೂ ನಂಬಿ ಕೂತಿಲ್ಲ. ವಸಂತ ಪ್ರಾರಂಭವಾದ ಕೂಡಲೆ ಎಲ್ಲ ಕೋಗಿಲೆಗಳೇನೂ ಕೂಡಿಯೇ ಕೂಗುವದಿಲ್ಲ; ಎಲ್ಲ ಗಿಡಗಳೂ ಒಮ್ಮೆಲೆ ಚಿಗಿಯುವದಿಲ್ಲ- ಕರ್ನಾಟಕದೊಳಗಿನ ಆಧ್ಯಾತ್ಮವಸಂತ ಸಮಯವನ್ನು ಸೂಚಿಸುವ ಕುಕಿಲು, ಚಿಗುರು ಇವರ ಬರೆಹ. ಬೇರೆ ಕೋಗಿಲಗಳಿಗೆ ಕಂಠ ಒರಬಹುದು, ಮಾಮರಗಳಿಗೆ ಚಿಗುರೊಡೆಯಬಹುದು ಈ ಸೂಚಕಧ್ವನಿಯಿಂದ.

ಈ ಪುಸ್ತಕದೊಳಗಿನ ಕೆಲವು ಮಾತುಗಳು ಅಷ್ಟು ಸಯುಕ್ತಿಕವಾಗಿ ತೋರಲಾರವು; ದೀಪದ ದೃಷ್ಟಾಂತ, ಗಡಿಯಾರದ ಸೂಚನೆ, ಜ್ಯೋತಿಷ್ಯದ ವಿಚಾರ ಮೊದಲಾದವು ಅದಕ್ಕೆ ಉದಾಹರಣೆಗಳು. ಅವು ಬರೆಯುವವರ ಲಹರಿಗಳು ಎಂದು ಬಿಡಬಹುದು. ಗ್ರಂಥದ ನಿಜವಾದ ಕೆಚ್ಚು ಆತ್ಮದ 'ಕಾಳರಾತ್ರಿ'ಯ ಮಾನಸಶಾಸ್ತ್ರದಲ್ಲಿದೆ. ಮಧುರಚೆನ್ನರು ತಮ್ಮ ಅನುಭವಕ್ಕೆ ಹತ್ತೂ ದಿಕ್ಕಿನಿಂದ ಶಾಸ್ತ್ರದ ಅನುಭಾವಿಗಳ, ಪ್ರಮಾಣಗಳನ್ನೊದಗಿಸಿದ್ದಾರೆ. ಲೇಖಕರು ಶಾಲೆಯಲ್ಲಿ ಕಲಿತದ್ದು ಕನ್ನಡ ಮುಲ್ಕೀ ಪರೀಕ್ಷೆಯವರೆಗೆ. ಇರುವದು ಹಳ್ಳಿಯಲ್ಲಿ. ಯಾವಾಗಲೂ ಹತ್ತರದಲ್ಲಿರುವ ಗೆಳೆಯರೂ ಅದೇ ಜಾತಿಗೆ ಸೇರಿದವರು. ಆದರೆ ಗೆಳೆಯ 'ಮಧುರಚೆನ್ನರ' ಜ್ಞಾನಲಾಲಸೆಯು ಅವರ ಸಾಧನೆಯಂತೆಯೇ ಅತಿ ತೀವ್ರತರವಾದದ್ದು. ಜೇನಹಂಕ ಚಿನಿವಾಲನಂತೆ ತನ್ನ ಕಡೆಗೆ ಬಂದದ್ದು, ಎಂಥ ಬಂಗಾರವೆಂದು ಅದರ ಬಣ್ಣವನ್ನು ಬೇರೆ ಬೇರೆ ವರೆಗಲ್ಲಿಗೆ ಹಚ್ಚುವದು ಅವರ ಅವಿಶ್ರಾಂತ ಉತ್ಸಾಹ, ಪ್ರಯತ್ನ, ವಿವೇಕ. ಇಂಗ್ಲೀಷ, ಮರಾಠೀ, ಸಂಸ್ಕೃತ, ಬಂಗಾಲೀ, ಹಿಂದೀ ಸಾಹಿತ್ಯಗಳನ್ನು ಅಸುಕೂಲಿಸಿದಷ್ಟು ತಿರುವಿಹಾಕಿದ್ದಾರೆ. ಸ್ವಪ್ರಯತ್ನದಿಂದ ಅವರ ಅಂತಃಕರಣದಂತೆಯೇ ಅವರ ಬುದ್ಧಿಯೂ ಚೂಪಾಗಿದೆ. 'ಕಾಳರಾತ್ರಿ'ಯಲ್ಲಿ ಇದಕ್ಕೆ ಸಾಕಷ್ಟು ಪ್ರತ್ಯಂತರಗಳಿವೆ. ಇಷ್ಟಾಗಿ ಅವರ ವಯಸ್ಸು ಮೂವತ್ತರ ಸೀಮೆಯನ್ನು ದಾಟಲಿದೆ. ಇಂಥವರ ಆಯುರಾರೋಗ್ಯವೂ ನಾಡಿನ ಭಾಗ್ಯದಲ್ಲೊಂದು. ಅವರ ಬರಹಗಳನ್ನೋದಿ ನಾಡಿನಲ್ಲಿ ಆಧ್ಯಾತ್ಮಿಕ ಜಾಗೃತಿಯೂ ವಿವೇಕವೂ ಕುದುರಿದರೆ

ಅದಕ್ಕಿಂತ ಬೇರೆ ಸಾಫಲ್ಯವುಂಟೇ? ಅವರ ಅನುಭವ ಬೇರೆಯುವರಿಗೆ ಉದ್ದೀಪನ ಮಾತ್ರ. ಕನ್ನಡ ನಾಡನ್ನು ಮುಸುಕಿದ ಕಾಳರಾತ್ರಿಯು ಹರಿದು ಹೋಗುವವರೆಗೆ ಅನೇಕ ಚಿಕ್ಕೆಗಳು ಬೇಕು. ಸೂರ್ಯ ಚಂದ್ರ ಮರು ಬರುವ ಕಾಲಕ್ಕೆ ಬರುವರು.

ಪ್ರೇಮವೆಂಬ ಶಬ್ದವು ಹೊಲೆಬಳಿಕೆಗಿಳಿದುಬಿಟ್ಟಿದೆ. ಮಹತ್ತ್ವಮ ವಾದ ಶಬ್ದಗಳ ಹಣೆಬರಹವೇ ಇದೋ! ರಾಗ, ಅನುರಾಗ, ಆಕರ್ಷಣ, ಆಸೆ, ವಾಸನೆ, ಇಚ್ಛೆ, ಸ್ವಾಮಿ–ಗುರು–ಮಾತಾಪಿತೃ–ದೇವತಾಭಕ್ತಿ ಸ್ವರಾಜ್ಯ–ಸಾಮ್ರಾಜ್ಯ–ವೈರಾಜ್ಯ–ಸ್ವಾತಂತ್ರ್ಯಗಳ ಉರ್ಜಿ ಕಾಮ–ರತಿ, ಇವೆಲ್ಲವೂ ಪ್ರೇಮದ ರೂಪಗಳು. 'ಅಹಿಂಸಾ ಪ್ರತಿಷ್ಠಾಯಾಂ ವೈರತ್ಯಾಗಃ' ಎಂದು ದರ್ಶನವು ಸಾರಿದ್ದರೂ ಇತಿಹಾಸವು ಮಾತ್ರ ವೈರಿಗಳಿಲ್ಲದ ವಿಭೂತಿಗಳನ್ನು ಇನ್ನೂ ತೋರಿಸಿಲ್ಲ. ಅಹಿಂಸಾಸಿದ್ಧನಲ್ಲಿ ಪಶುಪಕ್ಷಿ ಕ್ರಿಮಿಕೀಟಕಗಳು ವೈರವನ್ನು ಬಿಡಬಹುದು, ಮಾನವನು ಬಿಡಬಹುದೇ? ಅತಿದುಃಖಕ್ಕೂ ವಿಚಲನೆ ಹೊಂದದ ಯೋಗಿಗಳಿರ ಬಹುದು, ಆದರೆ ಇನ್ನೊಬ್ಬರಿಗೆ ದುಃಖಕೊಡಬೇಕೆಂಬ ಮಾನವನ ಪ್ರವೃತ್ತಿಯನ್ನು ನಿವೃತ್ತಿಗೊಳಿಸುವ ಸಾಮರ್ಥ್ಯವು ಮಾನವ ಮಹಾತ್ಮರ ಪ್ರೇಮರಸಾಯನದಲ್ಲಿ ಪರಿಪಾಕಕ್ಕೆ ಬಂದಿಲ್ಲವೆನ್ನಬೇಕಾ ಗುವದು. ಅಜಾತಶತ್ರುವೂ ಶತ್ರುಗಳಿರದೆ ಇರಲಿಲ್ಲ. ಪ್ರೇಮವು ಇಂದು ಅತಿಮಾನವರ ಕಣಸಾಗಿದೆ, ಬರಲಿರುವ ಪ್ರತಿದೇವನ ಮನಸ್ಸೇ ಅದೋ, ಕಾಲವು ಸಾಕ್ಷಿಗೊಡಬೇಕು.

**ದ. ರಾ. ಬೇಂದ್ರೆ**

Aum

ಓಂ ಶ್ರೀ ಓಂ

# ನಾಂದ್ಯಂತೇ ಸೂತ್ರಧಾರಃ

'**ಪೂರ್ವರಂಗ**', '**ಕಾಳರಾತ್ರಿ**' '**ಬೆಳಗು**', ಹಾಗೂ ಇನ್ನು ಮುಂದೆ ಬರೆಯಲಿರುವ '**ಮಾನಸ ರಾಜಹಂಸಿ**' ಮತ್ತು '**ಸಾಧನ ಸಮಾಪ್ತಿ**' ಈ ಪುಸ್ತಕಗಳೆಲ್ಲವೂ ನನ್ನ ಸ್ವಂತದ ಆಧ್ಯಾತ್ಮಿಕ ಜೀವನದ ನಕಾಶೆಯಾಗಿವೆಯೆಂಬುದನ್ನು ನಾನು ಮತ್ತೆ ಮತ್ತೆ ಹೇಳುವ ಅಗತ್ಯವು ಈಗ ಉಳಿದಿಲ್ಲ; ನಾಡಿನ ಅಣ್ಣಂದಿರು ಇದನ್ನು ಮೊದಲೇ ಬಲ್ಲರು.

ನಕಾಶೆಯನ್ನು ಚಿತ್ರಿಸುವುದು ಯಾತಕ್ಕಾಗಿ? ಗದ್ದುಗೆಯ ಮೇಲೆ ಅದನ್ನಿಟ್ಟು ಪೂಜಿಸುವುದಕ್ಕೆಂದು ಯಾವ ಬುದ್ಧಿವಂತನೂ ಭಾವಿಸಲಾರ ನಲ್ಲವೆ? ನಾನು ನನ್ನ ಸ್ವಂತದ ಜಂಬವನ್ನು ಕೊಚ್ಚಿಕೊಳ್ಳುವ ಉದ್ದೇಶ ದಿಂದ ಈ ಕೆಲಸಕ್ಕೆ ಕೈಹಾಕಿರದೆ, ನನ್ನಂತೆ ದಿಕ್ಕುಗೆಟ್ಟು ಅಲೆಯು ಬಹುದಾದ ದಾರಿಕಾರರಿಗೆ ಭರವಸವುಂಟಾಗಲೆಂಬ ಕರುಳಿನಿಂದ ನಿಂದೆಯ ಸಂಭವವನ್ನೂ ಕೂಡ ಲೆಕ್ಕಿಸದೆ ಈ ದುಸ್ಸಾಹಸಕ್ಕೆ ಬಿದ್ದಿರುವೆನೆಂದು ಪ್ರತಿಸಾರೆಯೂ ನಾನು ನನ್ನ ಹೃದ್ಗತವನ್ನು ಬೈಲಿಗಿಟ್ಟಿದ್ದೇನೆ.

ಮೊದಮೊದಲಿಗೆ ಕೇವಲ ಶಾಸ್ತ್ರಗಳನ್ನು ನೋಡಿದರೆ ಹೃದಯಕ್ಕೆ ತೃಪ್ತಿಯಾಗುವದಿಲ್ಲ. "**ಕಂಡು ಉಂಡು ಮನಗಂಡವರು ಈಗ ಎಲ್ಲಿದ್ದಾರೆ?**" ಎಂದು ಜೀವವು ಸಂದೇಹದಲ್ಲಿ ಒದ್ದಾಡಲಾರಂಭಿಸು ತ್ತದೆ. ಅಂಥ ಕಾಲದಲ್ಲಿ ಯಾರಾದರೊಬ್ಬ ಪ್ರಾಮಾಣಿಕ ಅನುಭವಿಕರು ತಮಗೆ ಅನಿಸಿದ ಮಾತುಗಳನ್ನು ಕತೆಯಾಗಿ ಬರೆದ ಒಂದು ಚಿಕ್ಕ ಲೇಖನವೂ ಕೂಡ ನಮ್ಮ ಮನವನ್ನು ಅತಿಶಯವಾಗಿ ಆಕರ್ಷಿಸಿ ಬಿಡು ತ್ತಿರುವದುಂಟು. ಇಂಥ ಸಂದರ್ಭಗಳು ನನ್ನ ಜೀವನದಲ್ಲಿ ವಿಪುಲವಾಗಿ

ಬಂದಿರುವದರಿಂದಲೇ ನಾನು ನನ್ನಂತೆ ಆತುರಪಡುವವರಿಗಾಗಿ ನನ್ನ ಅನುಭವಗಳ ಕಥೆಯನ್ನು ಹೇಳುವ ಹವಣಿಕೆಗೆ ಒಳಗಾದೆನು.

ನಾನು ಸಿದ್ಧಪುರುಷನಂತೆ ಕಾಣಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿರದೆ ಸಾಧಕರಲ್ಲಿಯೂ ಕೂಡ ನಾನು ಅತಿ ಕ್ಷುಲ್ಲಕನೆಂಬುದನ್ನು ನನ್ನ ಕಥೆಯಿಂದಲೇ ನಾನು ನಾಡುಗರಿಗೆ ಮನಗಾಣಿಸಿಕೊಡುವುದಕ್ಕೆ ಹಿಂದೆಮುಂದೆ ನೋಡಿಲ್ಲವೆಂಬುದನ್ನು ನನ್ನ ಪುಸ್ತಕಗಳನ್ನೋದಿದವರು ಬಲ್ಲರು.

ಮಹಾಪುರುಷರ ಜೀವನ ಚರಿತ್ರಗಳು ಎಷ್ಟೋ ಸಾರೆ ನಮ್ಮ ಬಾಯಿಗೆ ಹಿಡಿಸಲಾರದ ತುತ್ತುಗಳಾಗಿ ತೋರುತ್ತಿರುವದರಿಂದ ಅತಿ ಕ್ಷುದ್ರ ವ್ಯಕ್ತಿಗಳ ಸಾಹಸವೇ ಸರ್ವಸಾಧಾರಣರೆಲ್ಲರ ಭರವಸಕ್ಕೆ ಹೆಚ್ಚಿನ ಕಳೆಯನ್ನು ತರುವ ಸಂಭವವಿದೆ.

ಸ್ಥೂಲ ಸೃಷ್ಟಿಗಿಂತ ಹೆಚ್ಚಿಗೆ ಅದೃಶ್ಯವಾದ ಒಂದು ರಾಜ್ಯವುಂಟೆಂಬುದು ಎಷ್ಟೇ ಅಲ್ಪ ಪ್ರಮಾಣದಿಂದಲೇ ಆಗಲೊಲ್ಲದೇಕೆ ಅದು ನನ್ನ ಅನುಭವಕ್ಕೆ ಹೇಗೆ ಅಣುಅಣುವಾಗಿ ಗೋಚರಿಸಿತೆಂಬುದರ ವರದಿಯೇ ನನ್ನೀ ಆತ್ಮಕಥೆಯು.

ಹಿಂದೊಂದು ಕಾಲದಲ್ಲಿ ನನ್ನ ದೇಹಾರೋಗ್ಯವು ಸರಿಯಾಗಿ ಇದ್ದಾಗ ನಾನು ಎಷ್ಟೋ ವರುಷ ಇತಿಹಾಸ ಸಂಶೋಧನದ ಕೆಲಸದಲ್ಲಿ ನಿರತನಾಗಿದ್ದಂತೆ ಈಚೆಗಿನ ಕೆಲವು ವರುಷಗಳಲ್ಲಿ ನನ್ನ ದೀರ್ಘವಾದ ಅನಾರೋಗ್ಯದಲ್ಲಿ ಕಟ್ಟುವಡೆದು ಕೇವಲ ಒಳ ರಾಜ್ಯಕ್ಕೆ ಸಂಬಂಧಿಸಿದ ಅಧ್ಯಾತ್ಮ ಸಂಶೋಧನದ ಕಾರ್ಯದಲ್ಲಿ ತೊಡಕಿಕೊಂಡದ್ದರ ಫಲಸ್ವರೂಪವಾಗಿ ನನ್ನ ಈ ಆತ್ಮಕಥೆಯು ಆಗಿನಿಂದಲೂ ಆಗಾಗ ಅರಳುತ್ತ ನಡೆದಿದೆ.

ಈ "ಬೆಳಗು" ನನ್ನಿಂದ ಈಗೀಗ ಹೊಸದಾಗಿ ಬರೆಯಲ್ಪಟ್ಟದ್ದೇನೂ ಅಲ್ಲ. ಈ ಮೊದಲೇ ಎರಡು ವರುಷಗಳ ಹಿಂದೆ ಪ್ರಕಟವಾದ "ಕಾಳರಾತ್ರಿ"ಯೆಂಬುದರದೇ ಕೊನೆಯ ಭಾಗವು. ಆಗ ಅವಸರದ ಮೂಲಕ ಅಚ್ಚಾಗದೆ ಉಳಿದ ಅಂಶವಿದು. ಇದರ ಮುಂದಿನ ಎರಡು

ಭಾಗಗಳನ್ನು ಮಾತ್ರ ಹೊಸದಾಗಿ ಬೇಗನೆ ಬರೆಯುವ ಎತ್ತುಗಡೆಯಲ್ಲಿ ದ್ದೇನೆ. ನಾಡಿನ ಅಣ್ಣಂದಿರ ಇಚ್ಛೆಯು ವೇಗವೇ ನನ್ನಲ್ಲಿ ಆತುರವನ್ನೆಬ್ಬಿಸಿ ಬರೆಯಿಸಿ ಮುಗಿಸುವದೆಂದು ನಂಬಿದ್ದೇನೆ. ಓಂ ಶ್ರೀ ಓಂ.

**ಪುನಶ್ಚ—**

ಗುರು ಅರವಿಂದರ ಒಂದು ಸುವರ್ಣವಾಕ್ಯ ಉಚ್ಚರಿಸದೆ ಬೀಳ್ಕೊಳ್ಳಲಿಕ್ಕೆ ಜೀವವು ಒಲ್ಲೆನೆನ್ನುತ್ತದೆ. ಆದುದರಿಂದಿದು:—

"It is a fact that
Yogic experience runs
everywhere on the same lines."

—*The Riddle of this world*

"ಯೋಗಾನುಭವವು ಎಲ್ಲೆಲ್ಲಿಯೂ ಒಂದೇ ದಾರಿಯ ಮೇಲೆ ಸಾಗುತ್ತಿರುವುದೊಂದು ಸತ್ಯಸಿದ್ಧಾಂತವಾಗಿದೆ." Aum.

ಹಲಸಂಗಿ
೧೬-೮-೩೭

—ಋಷಿಗಳ ಶಿಶು
**ಮಧುರಚೆನ್ನ**

# ಪೂರ್ವ ಕಥಾವೃತ್ತ

## ೧. ಪೂರ್ವರಂಗ

ಕಥಾನಾಯಕನಾದ "ಜ್ಞಾನಭಿಕ್ಷು"ವು ಚಿಕ್ಕಂದಿನಿಂದಲೇ ಧಾರ್ಮಿಕ ಪ್ರವೃತ್ತಿಯುಳ್ಳವನು. ತನ್ನ ತಂದೆಯು "ದಪ್ತರಿ"ನಲ್ಲಿದ್ದ ಒಂದು ಪೌರಾಣಿಕ ಗ್ರಂಥವನ್ನೋದಿ ಗುರೂಪದೇಶವನ್ನು ಹೊಂದ ಬಯಸಿ ಒಂದು ಸಂಪ್ರದಾಯುವನ್ನು ಹೊಕ್ಕು ಅತೃಪ್ತನಾಗುವನು. ಕೊನೆಗೆ ತಾನು ಮೊದಲೋದಿದ ಪೌರಾಣಿಕ ಗ್ರಂಥದಲ್ಲೇ ಹೇಳಿದ ಪದ್ಧತಿಯಿಂದ ಮಾನಸಪೂಜೆಯನ್ನು ಆರಂಭಿಸುವನು. ಮುಂದೆ ಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಮಾಡುತಿದ್ದ ಕಾಲದಲ್ಲಿ ತಾರ್ಕಿಕತನವು ಹೆಚ್ಚಿ ಧರ್ಮಲಂಡನಾದ ನಾಸ್ತಿಕನಾಗುವನು. ಹೀಗೆ ಕೆಲದಿನ ಕಳೆದ ಮೇಲೆ ನಾಸ್ತಿಕತನದಿಂದ ಆಸ್ತಿಕತನಕ್ಕೆ ಮುಟ್ಟಿದ ಶ್ರೀ ವಿವೇಕಾನಂದ ಸ್ವಾಮಿಗಳ ಚರಿತ್ರವನ್ನೋದುವುದರಿಂದ ಪರಮೇಶ್ವರನ ಅಸ್ತಿತ್ವದ ಬಗೆಗೆ ನಂಬುಗೆ ಹುಟ್ಟುವುದು. ಆದರೆ ವ್ಯಾವಹಾರಿಕರ ಧರ್ಮಾಚರಣೆ ಗಳೆಲ್ಲ ಕುರುಡುನಂಬುಗೆಗಳಂತೆ ತೋರಿದ್ದರಿಂದ ಈ ವಿಚಾರದಲ್ಲಿ ತಲೆ ಕೆಡಿಸಿಕೊಳ್ಳಹತ್ತಿದನು. ಕೊನೆಗೆ ಈ ಮಾತು ವಿಚಾರಕ್ಕೆ ನಿಲುಕಲಾರ ದೆಂದು ಮನಗಂಡು ಪರಮಾತ್ಮನ ಪ್ರತ್ಯಕ್ಷ ಸಾನ್ನಿಧ್ಯವನ್ನೇ ದೊರಕಿಸಿ ಈ ತೊಡಕನ್ನು ಬಿಡಿಸಿಕೊಳ್ಳುವೆನೆಂದು ಕೃತಸಂಕಲ್ಪನಾದನು. ಮುಂದೆ ಜೀವನವು ಅತ್ಯಂತ ನಿರಾಶಾಮಯವಾಗಿ ಬಿಟ್ಟದ್ದರಿಂದ ಆತ್ಮ ಹತ್ಯಕ್ಕೆ ಪ್ರವೃತ್ತನಾಗುವನು. ಆದರೆ ಸುದೈವದಿಂದ ಸಕಾಲಕ್ಕೆ ವಿವೇಕವುಂಟಾದ್ದರಿಂದ ಪ್ರಯತ್ನವಾದದ ಮೇಲೆ ಭರವಸವನ್ನಿಟ್ಟು ದುಸ್ಸಾಹಸವನ್ನು ತ್ಯಜಿಸಿದನು. ಆ ಒಳಿಕ ತನ್ನ ಪರಮ ಶ್ರದ್ಧೆಯು ಶ್ರೀವಿವೇಕಾನಂದಸ್ವಾಮಿಗಳ ಹಾಗೂ ಶ್ರೀರಾಮಕೃಷ್ಣ ಪರಮಹಂಸರ

ಮತ್ತು ಶ್ರೀ ಅರವಿಂದರ ಗ್ರಂಥಗಳಲ್ಲಿ ಸಹ ಸಂದಿಗ್ಧವಾಕ್ಯಗಳಿವೆಯೆಂ ದೆನಿಸಿದ್ದರಿಂದ ಇವರ ಮೇಲಿನ ಶ್ರದ್ಧೆಯನ್ನು ಸಹ ಕಳೆದುಕೊಳ್ಳುವನು. ಆಮೇಲೆ ತನ್ನ ನಾಡಿನಲ್ಲಿ ಹೆಸರುವಾಸಿಯಾಗಿರುವ ಮಹಾ ಆಧ್ಯಾತ್ಮಿ ಗಳ ಸಹವಾಸವನ್ನು ಅಪೇಕ್ಷಿಸಿ ಅಂಥವರ ಬಳಿ ಸೇರಿ ಅಲ್ಲಿಯೂ ತಣಿಯು ಲಿಲ್ಲ. ಇಷ್ಟೆಲ್ಲ ಮುಗಿದ ಬಳಿಕ ಪುರಾತನ ಗ್ರಂಥಗಳಲ್ಲಿ ಸಹ ಪರಸ್ಪರ ವಿರುದ್ಧ ಸಂಗತಿಗಳಿವೆಯೆಂದರಿತು ಪುರಾತನ ಮಹಾಪುರುಷರ ವಾಣಿ ಯನ್ನೆಲ್ಲ ಶಾಸ್ತ್ರಜಾಲವೆಂದು ಬಗೆದು ಒಟ್ಟಾರೆ ಎಲ್ಲ ನಿಟ್ಟಿನಿಂದ ನಿರಾ ಧಾರ ಸ್ಥಿತಿಗೆ ಬಂದನು. ಇಲ್ಲಿಗೆ ಪೂರ್ವರಂಗದ ವೈಷಮ್ಯಖಂಡವು ಮುಗಿಯಿತು.

"ದೇವರನ್ನು ಎಂದೂ ಯಾರೂ ಕಂಡಿಲ್ಲ" ಎಂಬ ಅರ್ಥದ ವಾಕ್ಯಗಳನ್ನು ಹಲವು ಪುರಾತನ ದಿವ್ಯ ಗ್ರಂಥಗಳಲ್ಲಿ ಓದಿದ್ದೇ ಈತನ ಅಶಾಂತಿಗೆ ಪ್ರಬಲ ಕಾರಣವಾಗಿತ್ತು. ಆದರೆ ಅಂಥ ವಾಕ್ಯಗಳಲ್ಲಿ "ಕಂಡಿಲ್ಲ" ಎಂಬ ಮಾತಿನ ಅರ್ಥವು "ಚರ್ಮಚಕ್ಷುವಿನಿಂದ ಮಾತ್ರ ಕಂಡಿಲ್ಲ"ವೆಂದು ಆಗುತ್ತಿರುವುದಾಗಿ ಪ್ರಾಮಾಣಿಕ ಗ್ರಂಥಗಳಿಂದಲೇ ಮನವರಿಕೆಯಾದ್ದರಿಂದ ಪುನಃ ಆಶೆಯು ಆರಂಭವಾಯಿತು. ಆಗ ಪುರಾತನ ಪುರುಷರ ಪಾದಧೂಳಿಯಿಂದ ಪವಿತ್ರವಾದ ಪುಣ್ಯಕ್ಷೇತ್ರಕ್ಕೆ ಪಯಣ ಬೆಳಿಸಿ ಪುರಾತನರನ್ನು ನೆನಿಸಿ ನೆನಿಸಿ ಗೋಳಿಟ್ಟನು. ಆದರೂ ಏನೂ ಫಲ ತೋರಲಿಲ್ಲ. ಇಷ್ಟೊತ್ತಿಗೆ ತನ್ನ ವಂಶದ ವೃದ್ಧಸನ್ಯಾಸಿ ಯೊಬ್ಬನ ದರ್ಶನವು ಲಭಿಸಿತು. ಆ ಸನ್ಯಾಸಿಯು ಈತನಿಗೆ ತನ್ನ ಆತ್ಮ ಚರಿತ್ರವನ್ನೆಲ್ಲ ವಿಶದಪಡಿಸಿ ಸಮಾಧಾನವನ್ನು ಹೇಳಿದನು. ಅನಂತರ ನಮ್ಮ ಕಥಾನಾಯಕನು ಶ್ರೀ ಅರವಿಂದಯೋಗಿಗಳ ಪುಸ್ತಕಗಳನ್ನೋದಿ ಏಕಾಂತದಲ್ಲಿ ಸಾಧನವನ್ನು ಮಾಡತೊಡಗಿದನು. ಆದರೆ ಅನುಭವಿಕರ ಸಹಾಯವಿಲ್ಲದ್ದರಿಂದ ಆ ಸಾಧನದ ಫಲವು ವಿಶೇಷವೇನೂ ಲಭಿಸಲಿಲ್ಲ. ಆಮೇಲೆ ಒಂದಾನೊಂದು ದಿನ ಪಾಶ್ಚಾತ್ಯ ತತ್ವಜ್ಞಾನಿಗಳೊಬ್ಬರ ಗ್ರಂಥವೊಂದನ್ನು ಓದುತ್ತಿದ್ದ ಹಾಗೆ ಆಕಾಶದ ಅನಂತತ್ವದ ಕಲ್ಪನೆಯು ಕಣ್ಣಮುಂದೆ ಕಟ್ಟಿದಂತಾಗಿ ಪರಮಾತ್ಮನನ್ನು ಅರಿಯುವುದಕ್ಕೆ ಈ

ಅನಂತತ್ವವೊಂದೇ ಮಾರ್ಗವೆಂದು ನಿರ್ಧಾರವಾಯಿತು. ಇದೇ ಪ್ರಥಮ ಪರಿಚಯವು.

ಇಷ್ಟಾದ ಬಳಿಕ ಈತನ ಚಿತ್ತವು ಜಡಸೃಷ್ಟಿಯ ಕಡೆಯಿಂದ ಹೊರಳಿ ಜೀವಸೃಷ್ಟಿಯ ಕಡೆಗೆ ಬಂತು. ಸ್ವಾರ್ಥರಹಿತವಾದ ನಿಸ್ಸಂದಿಗ್ಧ ಪ್ರೇಮವು ಮಾನವನ ಜೀವನದಲ್ಲಿ ದಿಟದಿಟವಾಗಿ ಇಳಿಯಬಲ್ಲದೇ? ಎಂಬ ಪ್ರಶ್ನೆಕ್ಕೆ ಸಿಕ್ಕುಬಿದ್ದು ಅಂಥದೊಂದು ಪ್ರಯೋಗವನ್ನು ಆರಂಭಿಸಿ ವರ್ಷಗಟ್ಟಲೆ ಕಷ್ಟಪಟ್ಟು ಯಶಸ್ವಿಯಾದನು.

ಇಷ್ಟರಲ್ಲಿ ಜ್ಞಾನಭಿಕ್ಷುವಿಗೆ ಮರಣಾಂತಿಕವಾದ ಆನುವಂಶಿಕ ವ್ಯಾಧಿಯೊಂದು ಬಂದು ಗಂಟುಬಿತ್ತು. ಆದ್ದರಿಂದ ನಾಯಕನು ಗಾಬರಿಗೆ ಬಿದ್ದನು. ತನ್ನ ಆಧ್ಯಾತ್ಮದ ತಳಮಳವು ಕೊನೆಗಾಣುವ ಮೊದಲೇ ತನಗೆ ಸಾವು ಬಂತಲ್ಲಾ! ಎಂದು ಮರುಗಿ ದೇವನ ನಿಷ್ಕರುಣೆಗೆ ಬೆಂದು ಬಡಬಡಿಸತೊಡಗಿದನು. ಆದರೆ ಬೇನೆಯ ಸಲವಾಗಿ ಆರು ತಿಂಗಳು ಆಡವಿಯಲ್ಲಿರಬೇಕಾಗಿ ಬಂದದ್ದರಿಂದ ಆ ನಿರ್ಜನ ಏಕಾಂತವೇ ಈತನಿಗೆ ಫಲಕಾರಿಯಾಯಿತು. ಒಂದು ದಿನ ಬ್ರಾಹ್ಮೀ ಮುಹೂರ್ತದಲ್ಲಿ ಸಮಸ್ತವಿಶ್ವವೆಂದರೆ ಅದೊಂದು ಧ್ಯಾನಮಗ್ನ ಸಜ್ಜನಮೂರ್ತಿಯೆಂದು ಅನಿಸತೊಡಗಿ ಪ್ರಗಾಢವಾದ ಆನಂದಲಹರಿಯು ಹೊರಚಿಮ್ಮಿತು. ಅಂದಿಗೆ ಆತನ ಜನ್ಮವು ಧನ್ಯವಾಯಿತು. ಹಿಂದಿನ ಸಂದೇಹಗಳೆಲ್ಲ ಸುಟ್ಟುಹೋದವು. ಇಲ್ಲಿಗೆ ಪೂರ್ವರಂಗದ ಸಮನ್ವಯ ಖಂಡವು ಮುಗಿಯುವುದು.

## ೨. ಕಾಳರಾತ್ರಿ ಅಥವಾ ಮಧ್ಯರಂಗ

ಮುಂದಿನ ಮೂರು ವರ್ಷಗಳಲ್ಲಿ ನಡೆದ ಕಥೆಯು 'ಕಾಳರಾತ್ರಿ' ಯಲ್ಲಿ ಬಂದಿದೆ.

ಹೀಗೊಮ್ಮೆ ಸಾಯಲಾರದ ಶ್ರದ್ಧೆಯು ಹುಟ್ಟಿತು. ಇದರ ಮುಂದಿನ ಕಥೆಯೆಂದರೆ ಶ್ರದ್ಧೆಯನ್ನು ಮುತ್ತುವ ಸಕಲ ಸಂಕಟಗಳ ಭಾರಕ್ಕೆ ಬೊಗ್ಗಲಾರದ ಶಕ್ತಿಯು ಹೇಗೆ ಜನ್ಮತಾಳುವುದೆಂಬುದೇ.

ಮೊದಲು ಸಂದೇಹದಲ್ಲಿ ಸುಟ್ಟು ಸಣ್ಣಾಗುತ್ತಿರುವಾಗ ನಿಸ್ಸಂದಿಗ್ಧ ಶ್ರದ್ಧೆಯೊಂದನ್ನೇ ಸರ್ವಸ್ವದಂತೆ ಬಗೆದು ಅಪೇಕ್ಷಿಸುತ್ತಿರುವ ಸಾಧಕನು ಮುಂದೆ ಬಾಳುವೆಯ ಕುಸ್ತಿಯ ಕಣಕ್ಕೆ ಕಾಲಿಟ್ಟಾಗ ಶ್ರದ್ಧೆಯೊಂದೇ ಸಾಕಾಗದೆ ಶಕ್ತಿಯೂ ಅಗತ್ಯವಾದದ್ದೆಂದು ಮನಗಾಣುತ್ತಾನೆ. ಬಾಳುವೆಗೂ ಅಧ್ಯಾತ್ಮಕ್ಕೂ ಮೇಳು ಕೂಡಿಸುವಲ್ಲಿ ಈ ಮಾತು ತಪ್ಪದೆ ಆವಿರ್ಭವಿಸುತ್ತದೆ. ಇಲ್ಲಿ ಶಕ್ತಿಯೆಂದರೆ ಅಲೌಕಿಕ ಚಮತ್ಕಾರದ ಅಣಿಮಾದಿ ಅಷ್ಟಸಿದ್ಧಿಗಳಲ್ಲ. ಈಶಕೃಪೆಯ ಸಾರ್ವಕಾಲಿಕ ಸಹಾಯದ ಪ್ರತೀತಿಯಿಂದುಂಟಾಗುವ ಅವಿಚಲಿತ ಧೈರ್ಯವೇ ಈ ಶಕ್ತಿಯೆಂಬುದು. ಸಾಧಕನಿಗೆ ಜೀವನಕ್ಷೇತ್ರದಲ್ಲಿ ಹೆಜ್ಜೆಹೆಜ್ಜೆಗೆ ತನ್ನ ಕ್ಷುದ್ರತೆಯು ಮನವರಿಕೆಯಾಗಿ ಈಶಕೃಪೆಯ ಬೆಂಬಲವನ್ನು ಆತನು ಬಯಸುವಂತಾಗುತ್ತದೆ. ಆದ್ದರಿಂದ ಪೂರ್ವರಂಗದಲ್ಲಿ ಶ್ರದ್ಧೆಯನ್ನು ಹೆಚ್ಚುಹೆಚ್ಚು ಶುದ್ಧಗೊಳಿಸುವುದಕ್ಕೆಂದು ಸಂದೇಹಗಳ ದಾಳಿಯು ತಿರುತಿರುಗಿ ತೂರಿತೂರಿ ಬರುವಂತೆ ಮುಂದಿನ ಮಧ್ಯರಂಗದ ಕಾಲದಲ್ಲಿ ಶಕ್ತಿಯನ್ನು ಹೆಚ್ಚುಹೆಚ್ಚು ಬಲಪಡಿಸಲಿಕ್ಕೆಂದು ಸಂಕಟಗಳ ಸೈನ್ಯವು ಕ್ಷಣಕ್ಷಣಕ್ಕೆ ಹೊಸಹೊಸ ಉಗ್ರಸ್ವರೂಪದಿಂದ ಸಾಧಕನನ್ನು ಸಂಧಿಸುವದು. ಇದೇ ಕಾಳರಾತ್ರಿಯು. ಪೂರ್ವರಂಗದಲ್ಲಿ ಈಶ್ವರನ ಅಸ್ತಿತ್ವದ ಹಸಿವು ಚಲ್ಲಾಟವನ್ನೆಬ್ಬಿಸಿದಂತೆ ಕಾಳರಾತ್ರಿಯಲ್ಲಿ ಭಗವದನುಗ್ರಹದ ತಳಮಳವು ತಾಕಲಾಟವನ್ನು ನಡೆಯಿಸಿರುತ್ತದೆ.

ಪೂರ್ವರಂಗದ ಕೊನೆಯಲ್ಲಿ ಕಥಾನಾಯಕನಿಗೆ ಲಭಿಸಿದ ಪ್ರಗಾಢವಾದ ಭಾವಾವಸ್ಥೆಯು ಮುಂದಿನ ಕಾಲದಲ್ಲಿ ದಿನದಿನಕ್ಕೆ ಇಳಿಯುತ್ತ ಬಂದು ಅದು ಸಂಸ್ಕಾರಮಾತ್ರವಾಗುವುದಕ್ಕೆ ಆರಂಭವಾಗುವುದು. ಶ್ರೀ. ಅರವಿಂದರ ಗ್ರಂಥದಲ್ಲಿ ಈ ವಿಷಯವನ್ನು ಆತನು ಮೊದಲೇ ಓದಿದ್ದರಿಂದ ಆ ಭಾವದ ಇಳಿಕೆಗೆ ಎದೆಗೆಡಲಿಲ್ಲ. ಇಷ್ಟರಲ್ಲಿ ಈತನ ಹೆಂಡತಿ ಹಾಗೂ ಒಬ್ಬ ಜೀವದ ಗೆಳೆಯ ಇವರ ಜೀವನದಲ್ಲಿಯೂ ಅಲೌಕಿಕ ಅನುಭವಗಳು ಕೆಲಮಟ್ಟಿಗೆ ಹಣಿಕೆ ಹಾಕಿದ್ದರಿಂದ ಮೂವರೂ ಜೊತೆಜೊತೆಯಾಗಿ ಬಾಳುವೆಯ ಬಿಸಿಲಲ್ಲಿ ಕೈಕೈ ಹಿಡಿದು ದಾರೀ ನಡೆಯಲು

ಅನುಕೂಲವಾಯಿತು. ಜ್ಞಾನಭಿಕ್ಷುವಿಗೆ ಈ ಮೊದಲು ಬಂದ ಹಿರಿ ಅನುಭವದಿಂದ ಅವನ ಬುದ್ಧಿಗೂ ಭಾವಕ್ಕೂ ಅಗಾಧ ಸೂಕ್ಷ್ಮತೆ ಯುಂಟಾಯಿತು. ಅದರಿಂದ ಇದಕ್ಕಿಂತ ಮುಂಚಿನ ಕಾಲದಲ್ಲಿ ತನ್ನ ಬುದ್ಧಿಗೆ ಎಳ್ಳಷ್ಟೂ ಬಿಚ್ಚಲಾರದ ಜಟಿಲ ತತ್ವಗಳ ಬಗ್ಗೆ ಈಗ ಸಹಜ ವಾಗಿ ಊಹಾಪೋಹವನ್ನು ಮಾಡುವಂತಾಯಿತು. ಮತ್ತು ವಿಶ್ವ ಸೌಂದರ್ಯದ ಅಗಾಧ ಅನುಭೂತಿಯು ದಿನಬಳಿಕೆಯ ಮಾತಾದಂತಾ ಯಿತು. ಆದರೂ ದೈಹಿಕ ಅನಾರೋಗ್ಯ, ಆರ್ಥಿಕ ತಾಪತ್ರಯ, ಹಿರಿ ಯರ ದುರಾಗ್ರಹ ಇವುಗಳ ಮೂಲಕ ಚಿತ್ತವು ಪ್ರಬಲವಾಗಿ ವಿಕ್ಷೇಪ- ಗೊಳ್ಳುತ್ತಲಿದ್ದಿತು. ಹೀಗಾಗಿ ಅಧ್ಯಾತ್ಮದೊಳಗಿನ ಇನ್ನೂ ಹೆಚ್ಚಿನ ಸ್ಥಿತಿಯು ಲಭಿಸಿದ ಹೊರತು ಗತ್ಯಂತರವಿಲ್ಲೆಂದು ದೇವದೇವನಗೂಢ ಪಂಥತೊಟ್ಟು ಪುನಃ ಆತ್ಮಹತ್ಯಕ್ಕೆ ಹವಣಿಸಿದನು. ಆದರೆ ತಕ್ಕಹೊತ್ತಿ ನಲ್ಲಿ ವಿರುದ್ಧ ವಿಚಾರಗಳು ತಲೆದೋರಿದೊಡನೆಯೆ ಒಂದು ಅಲೌಕಿಕ ಚಮತ್ಕಾರವು ನಡೆಯಿತು. ಎಂದೂ ಬಾಯಿಪಾಠ ಮಾಡಿರದ ಎರಡು ಗೀತಾಶ್ಲೋಕಗಳು ತಲೆಯಲ್ಲಿ ಅಬ್ಬರದಿಂದ ಗದ್ದರಿಸಿ ಈತನನ್ನು ಮೂದ ಲಿಸಿ ನಡುಗಿಸಿಬಿಟ್ಟವು. ಕೂಡಲೆ ಈತನು ಈಶಶಕ್ತಿಯ ಅಬ್ಬರಕ್ಕೆ ಬೆರಗಾಗಿ " ಇನ್ನೆಂದಿಗೂ ಆತ್ಮಹತ್ಯಕ್ಕೆ ಎಳಸುವುದಿಲ್ಲ. ನಿನ್ನ ಇಚ್ಛೆ ಬಂದ ಕಾಲಕ್ಕೆ ಕೃಪೆಮಾಡು." ಎಂದು ನಿರ್ಧಾರವಾಗಿ ನುಡಿದನು. ಇಷ್ಟು ಒಂದು ವರುಷದ ಕಥೆ. ಇಲ್ಲಿಗೆ 'ಕಾಳರಾತ್ರಿ'ಯೊಳಗಿನ 'ಸಂಧ್ಯಾರಾಗ'ವೆಂಬ ಭಾಗವು ಮುಗಿಯಿತು.

ಕಾಳರಾತ್ರಿಯ ಕಾಲದ ಎರಡನೆಯ ವರುಷದಲ್ಲಿ ಒದಗಿದ ಮಹ ತ್ತರವಾದ ಸಂಕಟವೆಂದರೆ ನಾಯಕನಿಗೂ ಆತನ ತಾಯಿಗೂ ಉಂಟಾದ ಊಹಿಸಲಸದಳವಾದ ಕಲಹ. ಜ್ಞಾನಭಿಕ್ಷುವಿನ ತಂದೆ ಈತನ ಚಿಕ್ಕಂದಿ ಲ್ಲಿಯೇ ಗತಿಸಿದ್ದನು. ತಾಯಿಯೊಬ್ಬಳೇ ಏಕಮಾತ್ರ ಪುತ್ರನನ್ನು ಜೋಪಾನ ಮಾಡಿಕೊಂಡು ಬಂದಿದ್ದಳು. ಮಗನು ಕೇವಲ ಅಧ್ಯಾತ್ಮ ಪರಾಯಣನಾದ್ದರಿಂದ ಹಾಗೂ ಕಾಲವೈಷಮ್ಯದ ಮೂಲಕ ಮನೆತನವು ತುಂಬಾ ಸಾಲದಲ್ಲಿ ಮುಳುಗಿ ಹೋಗಿದ್ದಿತು. ಜ್ಞಾನಭಿಕ್ಷುವಾದರೋ

ಹೊಲಮನೆಗಳ ಭಾರವನ್ನು ಸಂಪೂರ್ಣವಾಗಿ ವೈವೇಲೆ ಹಾಕಿ ಕೊಳ್ಳುವ ಆಲೋಚನೆ ಮಾಡದೆ ರೈತರಿಗೆ ಕೊಟ್ಟು ಅನಾಯಾಸವಾಗಿ ಬಂದಷ್ಟು ಉತ್ಪನ್ನದಿಂದ ಹೇಗಾದರೂ ಉಪಜೀವನವನ್ನು ಸಾಗಿಸ ಬೇಕೆಂದು ಅನ್ನುತ್ತಿದ್ದನು. ಆದರೆ ಒಬ್ಬಳೇ ಬಹುದಿನ ಬಾಳುವೆ ಮಾಡುತ್ತ ಬಂದಿದ್ದ ಆ ತಾಯಿಗೆ ಇಂಥ ಮಾತು ಸಪ್ಪಗೆ ತೋರುತ್ತಿದ್ದುದರಿಂದ ಅವಳು ಸಮ್ಮತಿಸುತ್ತಿರಲಿಲ್ಲ. ಆದ್ದರಿಂದ ಈತನು 'ಇಬ್ಬರಲ್ಲಿ ಯಾರಾ ದರೂ ಒಬ್ಬರು ಹಿಂದಕ್ಕೆ ಸರಿಯದೆ ಗತ್ಯಂತರವಿಲ್ಲ'ವೆಂದು ಬಗೆದು ತಾನೇ ಈ ಉಪಾಯದಂತೆ ನಡೆಯುತ್ತಿದ್ದನು. ಇದರಿಂದ ಕುಟುಂಬದ ಸ್ಥಿತಿಯು ಹೆಚ್ಚು ಹೆಚ್ಚು ಕಷ್ಟಮಯವಾಗತೊಡಗಿತು. ತಾಳ್ಮೆಯು ಮೇರೆ ಮೀರಿ ತೀರ ಕುತ್ತಿಗೆಗೆ ಬಂದುದರಿಂದ ತಾಯಿಯ ಕಾರಭಾರ ವನ್ನು ನಿಲ್ಲಿಸಿದ ಹೊರತು ಬೇರೆ ಮಾರ್ಗವಿಲ್ಲವೆಂದೆನ್ನುವ ಹೊತ್ತೇ ಬಂತು. ಆದರೆ ಬಲವಂತವಾಗಿ ಹೀಗೆಲ್ಲಾ ಮಾಡಿದರೆ ತಾಯಿಯ ರಂಬಾಟ ಹೆಚ್ಚಿ ಹೋಗಿ ಮನೆಯು ಮಲ್ಲಶಾಲೆಯಾಗುವ ಹೊತ್ತು ಬರುವದಲ್ಲಾ ಎಂದು ಚಿಂತಿಸಿ ಅವಳ ಸಮ್ಮತಿಯಿಂದಲೇ ಹೇಗಾದರೂ ಕಾರ್ಯವನ್ನು ಸಾಧಿಸಿಕೊಳ್ಳಬೇಕೆಂದು— "ಅವ್ವಾ, ಬಹುದಿನ ನಾನು ನಿನ್ನ ಮಾತಿಗೆ ಅಡ್ಡಬರಲಿಲ್ಲ. ಇದನ್ನು ನೆನೆದು ನೀನೂ ಈಗ ನನ್ನ ಮಾತನ್ನು ನಡೆಯಿಸಿಕೊಡು" ಎಂದನು. ಅದಕ್ಕೆ ಆ ತಾಯಿ ಎಂಬವಳು ನುಡಿದದ್ದೇನಂದರೆ— "ನಿನ್ನ ಕೈಯಿಂದ ಗಳಿಸುವ ಕೆಲಸ ವಾಗಲಾರದ್ದಕ್ಕೆ ನೀನು ನನಗೆ ಅಧೀನನಾಗಿದ್ದಿ. ಇದರಲ್ಲಿ ನನ್ನಮೇಲೆ ನಿನ್ನ ಉಪಕಾರವೇನು"!!!

ಕರುಳಿನ ಕರುಳಾದ ತಾಯಿಯೆಂಬವಳೂ ಕೂಡ ಇಷ್ಟು ಕಠೋರ ಳಾಗುವುದು ಈ ಲೋಕದ ಸಂಗತಿಯಲ್ಲ. ವಿನಾಶಕಾಲಕ್ಕೆ ವಿಪರೀತ ಬುದ್ಧಿಯನ್ನು ಹುಟ್ಟಿಸುವ ಚಾತುರ್ಯವುಳ್ಳ ದುರ್ದೈವವೆಂಬುದರ ಆಟವಿದು ಎಂದು ಬಗೆದು, ಉಪಾಯವಿಲ್ಲದ್ದಕ್ಕೆ ತಾಯಿಗೆ ವಿರುದ್ಧವಾಗಿ ಸಂಸಾರದ ವ್ಯವಸ್ಥೆಯನ್ನು ಮಾಡಿದನು.

ಮೂರನೆಯ ವರ್ಷದಲ್ಲಿ ಪ್ರತಿಕೂಲತೆಯ ಸುರಿಮಳೆಯೇ ಸುರಿಯಿತು. ನಾಯಕನಿಗಂತೂ ಸರಿಯಲಾರದ ಅನಾರೋಗ್ಯ; ಆತನ

ತಿಗೆ ಒಂಬಕ್ಕೆ ಬದಲು ಎರಡು ಮಕ್ಕಳ ಹೆರಿಗೆ; ತಾಯಿಯೋ ಇವರ ಸುಕೂಲಕ್ಕೆ ಎಷ್ಟೊ ಬಾರಳು; ಮುಂಚೆ ಹುಟ್ಟಿದ ಇನ್ನೆರಡು ಎಕ್ಕಳಿಗೋ ಸದಾ ಬೇನೆ ಬೇಸರಿಕೆ. ಜ್ಞಾನಭಿಕ್ಷುವು ವ್ಯಾವಹಾರಿಕ ವರ್ಣಾಚಾರಗಳನ್ನು ಸ್ವಬುದ್ಧಿಗೆ ತಿಳಿಯದೆ ಎಷ್ಟೊ ಪಾಲಿಸಲಾರೆನೆಂದು ಿಂಥ ತೊಟ್ಟದ್ದರಿಂದ ಸುತ್ತುಮುತ್ತಲೆಲ್ಲ ಸಾಮಾಜಿಕರ ಹಾವಳಿ. ಬಡ್ಡಿನ ಕಷ್ಟವಂತೂ ಚಿರಸಂಗಾತಿ. ಆಗ ಜ್ಞಾನಭಿಕ್ಷುವು ದಿಕ್ಕುಗೆಟ್ಟು ೀವದೇವನಿಗೆ ಮೊರೆಯಿಡತೊಡಗಿದನು.— "ತಂದೇ, ಹೀಗೆ ಕೈಕಾಲು ಟ್ಟಿ ಹೊಡತ ಕೊಟ್ಟರೆ ನಾನು ಹೇಗೆ ತಾಳೇನು! ನನಗೆ ಏನು ಮಾಡೆನ್ನುತ್ತೀ! ನಿನ್ನ ಇಚ್ಛೆಯೋ ತಿಳಿಯದು!! ಮೇಲೆ ಏಟುಗಳೋ ಪರಿಮಿತ!!! ಹಿಂದೆ ಮುಂದೆ, ಆಚೆ ಈಚೆ, ಮೇಲೆ ಕೆಳಗೆ ಎಲ್ಲ ಕಡೆಗೆ ುಳ್ಳುಗಳನ್ನಿಟ್ಟು ಒಸಡೆ ಹರಿಯುವಂತೆ ಕಡಿವಾಣವನ್ನು ಜಗ್ಗಿದರೆ ನಾನೆತ್ತ ಹೆಜ್ಜೆ ಚೆಲ್ಲಲಿ?" ಎಂದು ಮಹಾ ನರಕದೊಳಗಿಂದ ಪಾಪಿ ಪರಿತಪಿಸುವಂತೆ ಪ್ರಲಾಪಿಸತೊಡಗಿದನು.

ಇಂಥ ಹೊತ್ತಿಗೆ ಮಹತ್ವದ ಒಂದು ಅಧ್ಯಾತ್ಮ ಗ್ರಂಥವು ಹೊಸ ವಾಗಿ ಓದಲಿಕ್ಕೆ ಸಿಕ್ಕಿತು. ಕೇವಲ ಪರಮಾತ್ಮನ ನಾಮಸ್ಮರಣ ನ್ಪೊಂದನ್ನೇ ಅನುಸರಿಸಿದ ಭಕ್ತಸಾಧಕರ ಜೀವನದಲ್ಲಿ ಬರುವ ವಿವಿಧ ಅನುಭವಗಳ ವರ್ಣನೆಯನ್ನು ಆ ಪುಸ್ತಕದಲ್ಲಿ ಓದಿ ಅದರ ನಾವೀನ್ಯಕ್ಕೆ ವಿಸ್ಮಯಪಟ್ಟದ್ದರಿಂದ ಒಳಗೊಳಗೆ ಒಂದು ಬಗೆಯ ಸಮಾಧಾನವು ಮೈದಾಳಿದೊಡನೆ— "ಸಂಕಲ್ಪಿಸು, ಆದರೆ ಫಲವನ್ನು ದೇವನ ಕಡೆಗೆ ಬಿಟ್ಟುಗೊಡು" ಎಂದು ಗುರು ಅರವಿಂದರು ಹೇಳಿದ ವಾಕ್ಯವೇ ತನಗೆ ಅಂತರ್ನಿರ್ದೇಶವಾಗಿ ಪರಿಣಮಿಸಿತು. ಇಲ್ಲಿಗೆ ಕಾಳರಾತ್ರಿಯ 'ಅಂಧಕಾರ'ವೆಂಬ ಭಾಗವು ಮುಗಿಯಿತು. ಇಲ್ಲಿಗೇ ಮುಗಿಯಲಿಲ್ಲ. 'ಬೆಳಗು' ಎಂಬ ಭಾಗದಲ್ಲಿ ನಾಲ್ಕನೆಯ ವರುಷದ ಕಥೆಯಿದ್ದು ಅದರ ಕೊನೆಯಲ್ಲಿಯೇ ನಮ್ಮ ಕಥಾನಾಯಕನ ಕಾಳರಾತ್ರಿಯು ಸಂಪೂರ್ಣ ವಾಗಿ ಕೊನೆಗಂಡು ಬೆಳಗಾಗುತ್ತದೆ. ಓಂ ಶ್ರೀ ಓಂ.

———

# ಬೆಳಗು

*"The bird of the morning sings!*
*(But) whence has he the word of*
*the morning before the morning*
*breaks, and when the drogon night*
*still holds the sky in its cold black*
*coils?"*

—'Tagore'

# ೧

"ಇನ್ನೂ ದಟ್ಟ ಕತ್ತಲೆಯು ಕಾವರವೇ ಮುಗಿಲಲ್ಲಿ ಮಡುಗಟ್ಟಿ ನಿಂತಿರುವಾಗ, ಎಲಾ, ಬೆಳಗಿನ ಹಕ್ಕಿಯೇ ಇದೇನು ನಿನ್ನ ಕಿಲಿಕಿಲಿಕೆ? ಬೆಳಗು ಬಾರದ ಮುನ್ನ, ಕತ್ತಲೆ ಕಳೆಯುದ ಮುನ್ನ, ಬೆಳಗು ಬರುತ್ತಿದೆಯೆಂದು ನೀನು ಹೇಗೆ ಭವಿಷ್ಯ ಹೇಳುವಿ?" ಎಂದು ವಾಚಕರು ಅಚ್ಚರಿಯಿಂದ ಕೇಳಬಹುದು. "ಅಯ್ಯೋ! ಇಷ್ಟೇಕೆ? ಯಾವನ ಒಳಗೆ ಬೆಳಗು ಬರುತ್ತಾ ಇದೇಯೋ ಅವನಿಗೇ ಅದರ ಹೆಜ್ಜೆಯ ಸಪ್ಪಳು ಕೇಳಿಸದಿರುವಾಗ ಹೊರಗಿನವರು ಹೀಗೆ ಅನ್ನುವುದು ಏನು ತಾನೆ ಅಸಂಭವ?" ಎಂಬುದಿಷ್ಟೇ ಉತ್ತರ.

"ಸಂಪೂರ್ಣವಾಗಿ ಸರ್ವವೆಲ್ಲ ಸತ್ಯಾನಾಶವಾಗಿ ಹೋಯಿತೆಂದು ನಿನಗೆ ತೋರಿದಾಗಲೇ ನಿನ್ನ ಸರ್ವಸಿದ್ಧಿಯು ಕೈಸಾರುವ ಕಾಲವು ಸನ್ನಿಕಟವಾಗಿದೆಯೆಂದು ತಿಳಿ. ನಾನು ನಿನಗೆ ದೂರಾದೆನೆಂದು ಬಲವಾಗಿ ಅನಿಸಿದಾಗಲೇ ನಾನು ನಿನಗೆ ತೀರ ಸನಿಯಾಗಿರುತ್ತೇನೆ. ಎಲಾ, ನೀನು ನಿನ್ನ ಸದ್ಯದ ಅನಿಸಿಕೆಗಳ ಮೇಲಿಂದ ಸಿದ್ಧಾಂತವನ್ನು ಕಟ್ಟುತ್ತಲಿರಬೇಡ." ಎಂದು 'ಇಮಿಟೇಶನ್ ಆಫ್ ಕ್ರೈಸ್ಟ್' ಎಂಬ ಗ್ರಂಥದಲ್ಲಿ ಪುರಾತನ ಮಹಾ ಅನುಭವಿಯಾದ ಕೆಂಪಿಸ್ಸನು ಪ್ರವಚಿಸಿರುವುದರ ಮನವರಿಕೆಯು ನಮಗೀಗ ಆಗಲಿದೆ.

ಅಂಡರಹಿಲ್ಲರ "ಮಿಸ್ಟಿಸಿಜಮ್" ಎಂಬ ಅತ್ಯಂತ ಮಹತ್ವದ ಪುಸ್ತಕದ ನಾಲ್ಕುನೂರಾ ಎರಡನೇ ಪುಟದೊಳಗಿನ **ಈ ಅಂಶವೇ ನಮ್ಮ ನಾಯಕನಿಗೆ ತನ್ನ ಕಾಳರಾತ್ರಿಯ ಕೊನೆಯ ಜಾವದ ಕಡೆಗೆ ಕಣ್ಣೆತ್ತಿ ನೋಡಹಚ್ಚಿದ್ದು.**

"ಕಾಳರಾತ್ರಿಯು ಮೆಲ್ಲಮೆಲ್ಲನೆ ನೆಲೆಗೊಳ್ಳುತ್ತ ಬರುವದು. ಆತ್ಮದ ಶಕ್ತಿಗಳೂ ಅಂತಃಸ್ಫುರಣಗಳೂ ಒಂದರ ಹಿಂದೊಂದು ಹಿಂದೆಗೆಯ ಲ್ಪಡುತ್ತವೆ. ಆನಂದದ ಪ್ರವೇಶಗಳು ಅಪರೂಪವಾಗುವವು. 'ಅನುಭಾವ ರಾಜ್ಯದ ಮಹಾಮೃತ್ಯು' ಅಥವಾ 'ಕೈಕೊಸರುವ ಅವಸ್ಥೆ' ಎಂಬುದಕ್ಕೆ ಹೀಗೆ ಬಂದು ಮುಟ್ಟುತ್ತದೆ. ಅದರಂತೆಯೇ (ಅಲ್ಲಿಯಿಂದ ಮುಂದೆ) ಹೊಸದಕ್ಕೆ ಅಂದರೆ 'ಐಕ್ಯಜೀವನ'ಕ್ಕೆ ಮುಂದುವರಿಯಬೇಕಾದರೂ ಕ್ರಮಗತಿಯು ಸಾಮಾನ್ಯವಾಗಿ ಮಂದವಾಗಿ ಇರುತ್ತದೆ. ಕಗ್ಗತ್ತಲೆಯ ವಿಪತ್ತುಗಳೂ ವೈಷಮ್ಯಗಳೂ ಅಧೀನವಾಗಿಬಿಡುತ್ತವೆ. ನಕಾರವನ್ನು ನಿಶ್ಚಯವು ಆಕ್ರಮಿಸುವದು. ಅವಿಜ್ಞತೆಯ ಮೋಡವನ್ನು ಪ್ರಭಾ ಕಿರಣಗಳು ಭೇದಿಸುವವು." ಎಂದು ಆಧುನಿಕ ಪಾಶ್ಚಾತ್ಯ ಅನುಭಾವ ಶಾಸ್ತ್ರಜ್ಞರೊಬ್ಬರು ಬೆರಳುಮಾಡಿ ತೋರಿಸಿದ ಕುರುಹುಗಳನ್ನು ನಾವು ನಮ್ಮ ನಾಯಕನ ಜೀವನ ಪಟದ ಮೇಲೆ ಚೆನ್ನಾಗಿ ದೃಷ್ಟಿಸಿ ಪರೀಕ್ಷಿಸಿದೆ ವಾದರೆ ಇನ್ನು ಮುಂದಿನ ಕಥೆಯು ಬೆಳಗಿನಜಾವದ್ದೇ ಸರಿಯೆಂದು ನಮಗೆ ತೋರದಿರದು. ತಿರುಗಿ ಕೇಳಿದರೆ 'ಇನ್ನುಮುಂದಿನದು' ಎಂದೆನ್ನುವುದಕ್ಕಿಂತ ಹಿಂದೆ ಪರಮ ನರಕಯಾತನೆಯ ಕಾಲವೆಂದು ನಾವು ಆತನ ಜೀವನದಲ್ಲಿ ಎಲ್ಲಿ ಕಂಡೆವೋ ಆ ತುಟ್ಟತುದಿಯ ಮೇಲೆಯೇ ಬೆಳ್ಳಿ ಮೂಡಿತೆಂದು ಧೈರ್ಯದಿಂದ ಹೇಳುವೆನು. "ನೀನು ತುಂಬಾ ಸರ್ವನಾಶವೆಂದು ತಿಳಿದ ಘಳಿಗೆಯಲ್ಲಿಯೇ ಸಕಲಸಿದ್ಧಿಯು ನಿನ್ನ ಕೈಸಾರಲಿಕ್ಕಿದ್ದಿತು." ಎಂಬ ಅನುಭಾವಗಮ್ಯ ವಚನವು ಸರ್ವಾಂಶ ದಿಂದಲೂ ಸತ್ಯವಾಗಿದೆಯೆಂದು ನಾನಿಲ್ಲಿ ಒಂದಿಷ್ಟು ಸ್ಪಷ್ಟವಾಗಿ ತೋರಿಸಿಕೊಡುವೆನು.

ಹಿಂದಿನ ವರುಷದ ಕೊನೆಯ ರೌದ್ರಾರ್ಧಭಾಗದಲ್ಲಿ ಯಾವಾಗ

"ಕೈಕಾಲು ಕಟ್ಟಿ ಹೊಡೆತ ಕೊಡುವುದು" ಎಂದೆನ್ನಬಹುದಾದಂಥ ಘನಘೋರ ಸ್ಥಿತಿಯಲ್ಲಿ ನಮ್ಮ ಜ್ಞಾನಭಿಕ್ಷುವು ನೆಲೆಗಾಣದೆ ಮುಳು ಮುಳುಗಿ ಗುಟುಕರಿಸುತ್ತಿದ್ದನೋ ಅದೇ ಕಾಲದಲ್ಲಿ, ಹಿಂದಕ್ಕೆ ಅವನ ಅಂತಃಕರಣವಲ್ಲಿ ಬಹ್ಮಸಂಸ್ಪರ್ಶದ ಮೊದಲದಿನವೇ ಬಿತ್ತಲ್ಪಟ್ಟಿದ್ದ ಅರವಿಂದರ ಆ ಸಾವಧಾನತೆಯ ವಚನ ಬೀಜವು (ಗ್ರಂಥಾರಂಭದಲ್ಲಿ ಹೇಳಿದ್ದು) ಅಂಕುರಿಸಿ ತಳಿರೊಡೆಯಹತ್ತಿತೆಂಬುದನ್ನು ನಿಮಗೆ ಸ್ಪಷ್ಟ ವಾಗಿ ತೋರಿಸಿಕೊಟ್ಟರೆ ಆಗ ನೀವು ನನ್ನ ಮಾತಿಗೆ ತಲೆದೂಗುವಿರಷ್ಟೆ?

"ಒಮ್ಮೆ ಕೈಸಾರಿದ ಸತ್ಯವು ಮತ್ತೆ ಕೈಯೊಳಗಿಂದ ಕೊಸರಿ ಕೊಳ್ಳುವಷ್ಟು ತರಲ (Diluted) ವಾಗುತ್ತಿರುತ್ತದೆ. ಮತ್ತು ಒಮ್ಮೆ ಮೇಲಕ್ಕೇರಿದ ಸಾಧಕನು ತಿರುಗಿ ದೇಹಾತ್ಮ ಬುದ್ಧಿಯ ತಳದವರೆಗೆ ಇಳಿಯುತ್ತಿರುತ್ತಾನೆ. ಆದರೆ ಇದು ಅವನ ಶಾಶ್ವತವಾದ ಪತನವಲ್ಲ. ಕೆಳಗಿನ ಕಲ್ಮಷಗಳನ್ನೆಲ್ಲ ತೊಳೆದು ಮೇಲಕ್ಕೆ ತೆಗೆದುಕೊಳ್ಳುವುದಕ್ಕೆ ಹೀಗಾಗುತ್ತದೆ." ಎಂದು ಪಾಂಡಿಚೇರಿಯ ಸಂಭಾಷಣದ ಪುಸ್ತಕದಲ್ಲಿ ('ಅರವಿಂದ ಮಂದಿರೇ' ಅರವಿಂದರು ಆಡಿದ ಅಮರವಾಣಿಯು ನಮ್ಮ ನಾಯಕನ ಕಿವಿಯಲ್ಲಿ ಹಿಂದಕ್ಕೆ ಆ ಹೊತ್ತೇ ಬಿತ್ತಲ್ಪಟ್ಟಿದ್ದಿತೆಂಬುದನ್ನು ನೀವು ಮೊದಲೇ ಬಲ್ಲಿರಿ. ಅದೊಂದೇ ಕಿರಣದ ಬೆಳಕು ಮೊದಲಿನ ಎರಡೂವರೆ ವರುಷಗಳ ಕತ್ತಲೆಯ ಕಷ್ಟಕ್ಕೆ ಸಾಕಾಯಿತು. ಆ ಬಳಿಕ ಮಹಾ ಅಂಧಂತಮಸ್ಸು ತೂರಿತೂರಿ ಮೈಮೇಲೆ ಬಂದ ಕಾಲದಲ್ಲಿ ಅರವಿಂದರದೇ ಇನ್ನೊಂದು ಗ್ರಂಥದಲ್ಲಿ ('ಎಸ್ಸೇಜ್ ಆನ್ ದಿ ಗೀತಾ') ಅಂತಹದೇ ಇನ್ನೊಂದು ಮಹಾವಾಕ್ಯವು ಲಭಿಸಿತು. ಅದು—

"ಈ ಹಾದಿಯಲ್ಲಿ ಗಂಡಾಂತರಗಳು ಇವೆ ಎನ್ನುವ ಮಾತು ನಿಃಸಂಶಯ; ಆಸುರ ಪ್ರಕೃತಿಯ ಉಗ್ರ ರಜೋಗುಣವು, ಅಧೋಗತಿ ಗೆಳೆಯುವ ತಮೋಗುಣವು ಉದ್ಧಾರಕ ಸತ್ತ್ವಗುಣಕ್ಕೆ ಇದಿರಾಗಿ ಹೋರಾಡುವವು; ಉನ್ನತಿಯ ರೆಕ್ಕೆಗಳನ್ನು ತಡೆದು ಊರ್ಧ್ವಮುಖ ವಾದ ದೈವಿಕ ಪರವಶತೆಯನ್ನು ಸಿಲ್ಲಿಸುವವು. ವಿಸ್ಮಯಕಾರಿಗಳಾದ

ಕೆಲವು ಮಹಾಕ್ಷಣಗಳಲ್ಲಿ, ಶಾಂತವಾದ ವಿಭ್ರಾಜಮಾನವಾದ ಅವಕಾಶದಲ್ಲಿ ದೈವೀ ಪ್ರಜ್ಞೆಯನ್ನು ಮೊದಲುಸಲ ಪಡೆಯಬಹುದಾದರೂ ಬೇಕಾದಾಗ, ಒಮ್ಮೆಗಿಲೆ ಇಡಿಗಿಡಿಯಾಗಿ ದೊರಕಿಸಲಾರೆವು. ದೈವೀ ಪ್ರಕೃತಿಯಲ್ಲಿ ಅಹಂಪ್ರಜ್ಞೆಯು ಸ್ಥಿರಧಾರಣೆಯನ್ನು ಹೊಂದಿ ನಿಲ್ಲಿಸುವ ಶಕ್ತಿಯ ಅಭಾವವು ಅನುಭವಕ್ಕೆ ಬರುವದು. ಜ್ಯೋತಿಯ ದರ್ಶನವಿಲ್ಲದೆ ತಮಸ್ಸಿನಲ್ಲಿ ಗಡಿಪಾರಾಗಿ ಇರುವ ಕಾಳರಾತ್ರಿಯ ಕಾಲವೂ ಬರುವದು. ಸಂಶಯ, ಸೋಲು, ವಿರೋಧಗಳ ವಿಷಗಳಿಗೆ ಕ್ಷಣಗಳು ತಲೆದೋರುವವು. ಆದರೆ ಯೋಗಾಭ್ಯಾಸದಿಂದಲೂ, ಅನುಭವದ ಪುನರಾವೃತ್ತಿಯಿಂದಲೂ ಆ ಪುರುಷೋತ್ತಮನ ಪ್ರತಿಷ್ಠೆಯು ಬೆಳೆದು ನಮ್ಮ ಸ್ವಭಾವವೇ ಅವನ ಕೈಸೆರೆಯಾಗುವದು"

ಇದಲ್ಲದೆ ಅದೇ ಆ ಹಿಂದಿನ ವರುಷದ ಪೂರ್ವಾರ್ಧದಲ್ಲಿ ಮಾವಿನ ಬನದಲ್ಲಿ ಅತ್ಯಾಸಂದದಿಂದ ಇದ್ದಾಗ ವ್ಯಾಸಂಗಿಸಿದ ಅಂಡರ್‌ಹಿಲ್ಲರ 'ಮಿಸ್ಟಿಸಿಜಂ' ಅಥವಾ ಅನುಭಾವವಿದ್ಯೆಯೆಂಬ ಗ್ರಂಥದಲ್ಲಿ ಬ್ರಹ್ಮ ಸಂಸ್ಪರ್ಶದ ಅವಸ್ಥೆಯ ಅನಂತರ ಕಾಳರಾತ್ರಿಯೆಂಬ ಘೋರಾವಸ್ಥೆಯೊಂದು ಮುಂದಿನ ಮಹಾ ದಿವ್ಯಜೀವನದ ಸಿದ್ಧತೆಯ ಸಲುವಾಗಿ ಬರುತ್ತಿರುತ್ತದೆಯೆಂದು ಸವಿಸ್ತಾರವಾಗಿ ಹೇಳಿದ್ದುದಂತೂ ಮೊದಲೇ ಗೊತ್ತಾಗಿದ್ದಿತು. ತಿರುಗಿ ಮುಂದಿನ ಆರು ತಿಂಗಳ ಕಾಲದಲ್ಲಿ ಅರವಿಂದರ ಮೇಲ್ಕಾಣಿಸಿದ ಆ ಗೀತಾಭಾಷ್ಯೋಕ್ತ ವಾಕ್ಯವು ಕಣ್ಣಿಗೆ ಬಿದ್ದುದರಿಂದ 'ಕಾಳರಾತ್ರಿ'ಯ ತತ್ತ್ವಕ್ಕೆ ಆತನಲ್ಲಿ ಮತ್ತಿಷ್ಟು ಸ್ಪಷ್ಟಸ್ವರೂಪವು ಬಂತು. "ಇದೂ ಒಂದು ಅವಸ್ಥೆ." "ಇದು ಪತನವಲ್ಲ." ಎಂಬುದು ಆತನಿಗೆ ನಿಚ್ಚಳವಾಯಿತು.

ಇದೊಂದಲ್ಲದೆ— ಆಕಾಶದಲ್ಲಿ ಪ್ರತಿವರ್ಷ ಯುರೇನಸ್ (ಹರ್ಷಲ್) ಎಂಬ ಗ್ರಹವು ವಿಪರೀತಗತಿಯಿಂದ ಚಲಿಸುತ್ತಿರುವ ಐದು ತಿಂಗಳ ಕಾಲದಲ್ಲೇ ತನಗೆ ಆ ಗ್ರಹಧರ್ಮಕ್ಕನುಗುಣವಾದ ಕಲ್ಪನಾತೀತ ಕಷ್ಟಗಳು ಅಕಸ್ಮಾತ್ತಾಗಿ ಮೈದೋರುವವೆಂಬ ಅಂಶವು ಗೊತ್ತಾದುದೂ ಅದೇ ಕಾಲದಲ್ಲಿ. ಅಲ್ಲದೆ ಒಟ್ಟಾರೆ ಹಿಂದಿನ ಆರು ವರುಷಗಳಲ್ಲಿ

ಗೊತ್ತಾದುದಕ್ಕಿಂತ ಎಷ್ಟೋಪಟ್ಟು ಹೆಚ್ಚಿಗೆ ಜ್ಯೋತಿಷ್ಯಜ್ಞಾನವು ಒಮ್ಮೆಲೆ ತೀರ ತುಸು ದಿನಗಳಲ್ಲೇ ಬೆಳೆದುದೂ ಅದೇ ಕಾಲದಲ್ಲಿ; ಜ್ಯೋತಿಷ್ಯದ ಸತ್ಯತೆಯು ಹೆಚ್ಚು ಹೆಚ್ಚು ನಿದರ್ಶನಕ್ಕೆ ಬಂದಹಾಗೆಲ್ಲ ಸಮಾಧಾನ ವೃತ್ತಿಯು ಬೆಳೆಯುವುದಕ್ಕೆ ಬಹಳ ಅನುಕೂಲವೆಂಬು ದಂತೂ ಸಹಜವೇ ಆಗಿದೆ.

ಒಟ್ಟಿಗೇನು? ಮೊಳೆಯಲಿರುವ ಬೀಜದ ಮೇಲಿನ ಬಿರುಸಾದ ಕವಚವು ನೆನೆದು ಉಬ್ಬಿ ಬಿರಿಯಬೇಕಾದರೆ ನೋವಾಗದೆ ಬಿಟ್ಟೀತೆ? ಆ ನೋವು ಪರಮಾವಧಿಗೆ ಬಂದಿತೆಂದಾಗಲೇ ಗೊರಟು ಬಿರಿಯುತ್ತದೆ. ಮತ್ತು ಗೊರಟು ಬಿರಿಯುವುದೆಂದರೇನೇ ಮೊಳಕೆ ಮೈದೋರುವುದು ಎಂದರ್ಥ. ಒಳಗೆ ಅದು ಅಂಕುರವೊಡೆದರೂ ಹೊರಗೆ ಕಾಣಬೇಕಾದರೆ ಇನ್ನೂ ಎಸೋ ದಿವಸಗಳು ಬೇಕಷ್ಟೆ? ನಮ್ಮ ನಾಯಕನಲ್ಲಿ ಆವಾಗಳೇ ಅದು ಒಳಗೊಳಗೆ ಮೊಳಕೆಯೊತ್ತಿದ್ದರೂ ಆತನಿಗೆ ಅದು ಗೋಚರಕ್ಕೆ ಬರುವಷ್ಟು ಅದರ ಬೆಳವಣಿಗೆಯಾಗಲಿಕ್ಕೆ ಮುಂದೆ ಸುಮಾರು ಎರಡು ವರುಷಗಳ ಕಾಲವು ಕಳೆಯಿತು. ತನ್ನೊಳಗಿನದೇ ತನಗೆ ಕಂಡು ಬಾರದೆ ಇರುವಾಗ ಹೊರಗೆ ನಿಂತು ಆಲೋಚಿಸುವ ನಮಗೆ ಅದರ ಸುಳುವು ಹತ್ತದೆ ಇರುವುದು ಬಹಳೇ ಸಹಜವಾಗಿದೆ. ಆದರೆ ಮುಂದೆ ಆತನಿಗೆ ತನಗೇ ಗೊತ್ತಾದ ಬಳಿಕ ಆತನು ಅತ್ಯಾಶ್ಚರ್ಯದಿಂದ "ಆಹಾ! ಹೊತ್ತುಹೊರಡಹತ್ತಿ ಎಷ್ಟೋ ಕಾಲವಾಗಿದೆಯಾದರೂ ನಾನಿನ್ನೂ— 'ಕಾಳರಾತ್ರಿಯ ಕೊನೆಯ ಘಳಿಗೆಯು ಎಲ್ಲೋ ಅಪರಂಪಾರದೊಳಗೆ ಬಹುದೂರದಲ್ಲಿದೆ'ಯೆಂದೇ ಭಾವಿಸಿದ್ದೆನಲ್ಲಾ!" ಎಂದು ನನ್ನಿದಿರಿಗೆ ಎಲ್ಲಾ ಮಾತನ್ನು ಬಿಚ್ಚಿಹೇಳಿದ್ದರಿಂದ ನಾನಿಂದು ಹೇಳಿಕೊಟ್ಟ ಕಾಲದಿಂದ ಮುಂದಿನ ಕಥೆಯನ್ನು "ಬೆಳಗಿನಜಾವ"ವೆಂದು ಬೇರೆ ಹೆಸರನ್ನಿಟ್ಟು ಬರೆಯುತ್ತಲಿದ್ದೇನೆ. ಇಲ್ಲದಿದ್ದರೆ ನಾನೂ ನಿಮ್ಮಂತೆ ಇನ್ನೂ 'ಅಂಧಃ ಕಾರ"ವೇ ಇದೆಯೆಂದು ಅದೇ ಖಂಡದಲ್ಲಿಯೇ ಮುಂದಿನ ವಿಷಯ ವನ್ನೆಲ್ಲ ತುರುಕಿ ಬಿಡುತ್ತಿದ್ದೆನು.

'ಮ್ಯಾಡಮ್ ಗುಂಯೋ' ಎಂಬ ಪುರಾತನ ಮಹಾ ಅನುಭಾವಿನಿ

ಯೊಬ್ಬಳು ತನ್ನ ಆತ್ಮಚರಿತ್ರದಲ್ಲಿ ಈ ವಿಷಯವನ್ನು ಅವಳೂ ಇದೇ ಮೇರೆಗೆ ವರ್ಣಿಸಿರುವುದನ್ನು ನೋಡಿದರೆ ನಮಗೆ ಇದುವರಗಿನ ವಿವರಣೆಯು ಯಥಾರ್ಥ ಸ್ವರೂಪವು ತಟ್ಟನೆ ಗೊತ್ತಾಗುವದು. ಅದು ಹೇಗೆಂದರೆ—

"ಕೆಡುಗಾಲದಲ್ಲಿ ನಾನು ನಿನ್ನನ್ನು ತುಂಬಾ ಕಳಕೊಂಡೆನೆಂದು ನನಗೆ ತೋರುತ್ತಿದ್ದಿತು. (ಆದರೆ) **ನಿಶ್ಚಯವಾದ ಮತ್ತು ಆಳವಾದ ಸಹಾಯವೊಂದು ಇದ್ದಿತಾದರೂ ಆತ್ಮಕ್ಕೆ ಅದು ಗೊತ್ತೇ ಆಗಿರಲಿಲ್ಲ.**"



೨

ಹೊಸ ವರುಷದ ಕಥೆಯನ್ನು ಆರಂಭಿಸುವುದಕ್ಕೆ ಮುಂಚೆ ನಮ್ಮ ವಾಚಕರ ಸಂದಿಗ್ಧ ಮನಸ್ಥಿತಿಯನ್ನಿಷ್ಟು ಬಯಲುಮಾಡಿಕೊಂಡೇ ಮುಂದೆ ಸಾಗುವುದು ಒಳಿತಲ್ಲವೇ? "ಈ ಹೊಸ ವರ್ಷದ ಆರಂಭದಲ್ಲಿ ಜ್ಞಾನಭಿಕ್ಷುವಿಗೆ ಬಂದ ಅಂತರ್ನಿರ್ದೇಶದ ಅರ್ಥವೇನು? ಮತ್ತು Will ಹಾಗೂ Desire (ಅಂದರೆ ಸಂಕಲ್ಪ ಮತ್ತು ಬಯಕೆ) ಇವುಗಳಲ್ಲಿರುವ ಭೇದವೇನು?" ಎಂಬುದೊಂದು ನಮ್ಮ ವಾಚಕರನ್ನು ಬಲವಾಗಿ ಪೀಡಿಸಬಹುದಾದ ಪ್ರಶ್ನವಾಗಿದೆ. Will ಎಂಬುದು ಆತ್ಮ ಸಂಕಲ್ಪ; ಆದರೆ Desire ಎಂಬುದು ಜೀವಭಾವದ ಬಯಕೆ. ಒಂದು ಧೀರ ಆಕಾಂಕ್ಷೆ, ಮತ್ತೊಂದು ಅಧೀರ ವಾಸನೆ. ತೋರಿಕೆಯಲ್ಲಿ ಒಂದೇ ಲಕ್ಷಣವಿರುವ ಕೆಲವೊಂದು ಯುಗ್ಮಗಳೊಳಗಿನ ಪರಸ್ಪರ ಸೂಕ್ಷ್ಮ ವ್ಯತ್ಯಾಸವನ್ನು ಕಂಡು ಹಿಡಿಯುವುದು ಎಷ್ಟೋ ಸಾರೆ ಬಹು ಬಿಕ್ಕಟ್ಟಿನ ಪ್ರಶ್ನವೇ ಆಗಿ ಬಿಡುತ್ತಿರುತ್ತದೆ. ಮೋಹ—ಪ್ರೇಮ, ಕಾಮ—ಸೌಂದರ್ಯಾನುಭೂತಿ, ಕನಿಕರ-ಶೋಕ ಮುಂತಾದವುಗಳ ಸೂಕ್ಷ್ಮವ್ಯತ್ಯಾಸವನ್ನು ನಾವು ನಮ್ಮ ಜೀವನರಂಗದಲ್ಲಿ ಅವುಗಳ ಆಟ ನಡೆದಾಗ ಪರೀಕ್ಷಿಸ ಹೋದಹಾಗೆಲ್ಲಾ ನಮಗೆ ದಿಗ್ಭ್ರಮೆಯಾಗುವಷ್ಟು ಸೋಜಿಗವೆನಿಸದೆ ಬಿಡದು. ಇಡೀ ಗುಣವೃತ್ತಿಗಳಲ್ಲಿ

ಒಂದನ್ನೊಂದು ತೀರ ಹೋಲುವ ಎರಡೆರಡರದೊಂದು ಮಹಾಸಾಗರದಲ್ಲಿಯೇ ನಾವು ಈಸುಬಿದ್ದಂತಾಗುತ್ತದೆ.

ಆದರೆ ಒಟ್ಟಿನಲ್ಲಿ ಹೇಳಬೇಕೆಂದರೆ ನಮ್ಮ ಅಂತರಂಗದಲ್ಲಿರುವ ಗುಣವೃತ್ತಿ ಸ್ಥಾನವು ಎರಡು ನಾಡುಗಳ ನಡುವೆ ಹರಿಯುವ ಹೊಳೆಯಂತಿದೆಯೆಂದು ತೋರುತ್ತದೆ. ಆತ್ಮಭಾವವೆಂಬ ಆಚೆಯ ನಾಡೊಂದು, ಜೀವಭಾವವೆಂಬ ಈಚೆಯ ಪ್ರದೇಶವೊಂದು. ಇವೆರಡರ ನಟ್ಟನಡುವೆ ನಮ್ಮ ಪ್ರಾಣಾಧಿಷ್ಠಾನವಿದ್ದಿರಬೇಕು. ಈ ಪ್ರಾಣನದಿಯಲ್ಲಿ ಈಚೆಯ ಹಾಗೂ ಆಚೆಯ ದಡಗಳ ಅಲೆಗಳಲ್ಲಿ "ಈಚೆಯ ಆಚೆಯ" ಎಂಬ ಒಂದು ವ್ಯತ್ಯಾಸವನ್ನು ಬಿಟ್ಟರೆ ಉಳಿದ ಕೆಲವು ಲಕ್ಷಣಗಳು ಎರಡಕ್ಕೂ ಒಂದೇ ಸಮಾನವಾಗಿರಬಹುದು. ಯಾಕೆಂದರೆ ಎರಡರ ಉಗಮವೂ ಒಂದೇ ಹೊಳೆಯಲ್ಲಿ. ಅದರಲ್ಲಿಯೂ ಸಾಮಾನ್ಯ ಜೀವಿಗಳಲ್ಲಿ, ಈಚೆಯ ಅಲೆಗಳೇ ಹೆಚ್ಚಾಗಿಯೂ ಆಚೆಯವು ಕಡಿಮೆಯಾಗಿಯೂ—ಇಷ್ಟೋ ಅಲ್ಲದೆ ಇದ್ದಷ್ಟು ಆ ತುಸು ಅಲೆಗಳಿಗೂ ಈಚೆಯವುಗಳ ಘನಸಂಪರ್ಕದಿಂದ ಅವುಗಳ ಮೂಲರೂಪವೇ ಬದಲಾಗುತ್ತಿರಬಹುದಾಗಿಯೂ ಹೀಗೊಂದು ಏನೇನೋ ಗದ್ದಲಕ್ಕಿಟ್ಟು ಬಿಟ್ಟಿರುವಂತೆ ನನಗೆ ತೋರುತ್ತದೆ. ಆದರೆ ಆತ್ಮಪರಾಯಣ ಜೀವಗಳಲ್ಲಿ ಇದಕ್ಕೆ ವಿಪರೀತವಾಗಿ ಕಂಡುಬರುತ್ತಿರಲೇಬೇಕೆಂಬುದು ಸಯುಕ್ತಿಕವೇ ಅಲ್ಲವೇ? ಮೋಹ, ಕಾಮ, ಶೋಕ, ಬಯಕೆ ಇವು ಈಚೆಯ ಅಲೆಗಳಾಗಿಯೂ, ಪ್ರೇಮ, ಶುದ್ಧ ಸೌಂದರ್ಯಾನುಭೂತಿ, ಕರುಣೆ, ಆತ್ಮಸಂಕಲ್ಪ ಇವು ಅದೇ ನದಿಯ ಆಚೆಯ ಅಲೆಗಳಾಗಿಯೂ ಇದ್ದಿರಬಾರದೇಕೆ?

ಅರವಿಂದರ ಈ ಮುಂದಿನ ವಾಕ್ಯವು ಮೇಲಿನ ವಿಚಾರಗಳನ್ನೇ ಸಮರ್ಥಿಸುವಂತಿದೆ ನೋಡಿರಿ:—

"ಭಾವನಾ ವೃತ್ತಿಗಳು ಎರಡು ಪ್ರಕಾರದವುಗಳಿವೆ. ಒಂದು ನೈಸರ್ಗಿಕ ಅಥವಾ ಶಾಶ್ವತ, ಮತ್ತೊಂದು ಕೃತ್ರಿಮ ಅಥವಾ ವಿಕಾರ. ಒಂದು ಜ್ಞಾನದಿಂದ ಮುಂದುವರಿಯುವುದಾದರೆ ಮತ್ತೊಂದು ಅಜ್ಞಾನದ ಪ್ರತಿಕ್ರಿಯೆಯಾಗಿದೆ."

ಈಗ ನಾನು Will ಮತ್ತು Desire ಇವೆರಡು ಶಬ್ದಗಳ ಸೂಕ್ಷ್ಮ ಭೇದವನ್ನು ಇನ್ನಿಷ್ಟು ಸ್ಪಷ್ಟಗೊಳಿಸುವುದಕ್ಕಾಗಿ ಅರವಿಂದರದೇ ಇನ್ನೊಂದು ವಾಕ್ಯದ ಕಡೆಗೆ ನಮ್ಮ ವಾಚಕರ ಲಕ್ಷ್ಯವನ್ನೆಳೆಯುವೆ. ಅದರಲ್ಲಿ ಅವರು 'ಹರ್ಷ' ಮತ್ತು 'ಆನಂದ' ಇವೆರಡು ಬೇರೆ ಬೇರೆ ಸ್ಥಿತಿಗಳೆಂದು ತೋರಿಸಿಕೊಟ್ಟಿದ್ದಾರೆ. ಅದರ ಮೇಲಿಂದ ನಾವು ನಮ್ಮ ಈ ಮೇಲಿನ ಶಬ್ದಗಳ ಅರ್ಥವನ್ನು ಹೆಚ್ಚು ನಿಚ್ಚಳವಾಗಿ ತಿಳಿದುಕೊಳ್ಳ ಬಲ್ಲೆವು.

"(ಶುದ್ಧ ಭೋಗವೆಂಬುದು) ಹರ್ಷವೂ ಅಲ್ಲ, ಸುಖವೂ ಅಲ್ಲ; ಅದು ಆನಂದವು."

ಈ ವಾಕ್ಯದ ಅರ್ಥವನ್ನು ಮಾಡಿಕೊಳ್ಳುವುದೇ ನಮಗೆ ಮೊದಲು ಬಿಗಿಯಾಗಿದೆ. ನಮಗೆ ಸುಖ ಮತ್ತು ಹರ್ಷಗಳಿಗಿಂತ ಹೆಚ್ಚಿನ ಸ್ಥಿತಿಯ ಅನುಭವವೇ ಇಲ್ಲದ್ದರಿಂದ ಹೀಗಾಗುತ್ತದೆ. ಇದರಂತೆ Will ಮತ್ತು Desire ಎಂಬವುಗಳ ಹಣೇಬರಹವೂ ಅದೇ.

ಏನಿದ್ದರೂ ಇದರ ಅರ್ಥವನ್ನು ಸ್ವಲ್ಪ ಹೆಚ್ಚು ಸ್ಪಷ್ಟವಾಗಿ ತಿಳಿದುಕೊಳ್ಳದೆ ನಮಗೆ ನಿರ್ವಾಹವೇ ಇಲ್ಲ. ಆದುದರಿಂದ ಇನ್ನಿಷ್ಟು ಪ್ರಯತ್ನಿಸುವಾ.

"Will" ಎಂಬ ಶಬ್ದವು ಪ್ರಾಚೀನ ಧಾರ್ಮಿಕ ವಾಙ್ಮಯದಲ್ಲಿ ಈಶ್ವರನ ಸಂಕಲ್ಪಕ್ಕೆ ಉಪಯೋಗಿಸಲ್ಪಟ್ಟಿದೆ. "ಈಶನು ಸಂಕಲ್ಪಿಸಿದ ತತ್ಕ್ಷಣದಲ್ಲಿ ಆಗಬೇಕಾದುದೆಲ್ಲ ಆಗಿಬಿಡುತ್ತದೆ" ಯೆಂಬರ್ಥದ ಮಾತುಗಳು ಆ ಗ್ರಂಥಗಳಲ್ಲಿ ವಿಪುಲವಾಗಿ ಸಿಕ್ಕುತ್ತವೆ. ಇಲ್ಲಿ ಈಶನ ಇಚ್ಛೆಗೂ ಮಾನವನ ಇಚ್ಛೆಗೂ ಇರುವ ವ್ಯತ್ಯಾಸವೇನೆಂಬುದನ್ನು ಕಲ್ಪಿಸಲು ನಾವು ಸಮರ್ಥರಾದರೆ ನಮ್ಮ ಕೆಲಸವೇ ಆದಂತಾಗುತ್ತದೆ. ಈಶ್ವರನು ಸರ್ವಸಮರ್ಥ–ಸದಾ ಆನಂದರೂಪನೆಂದು ಅಂದ ಮೇಲೆ ಅವನ ಸಂಕಲ್ಪದಲ್ಲಿ ಅಸಮರ್ಥರಿಗುಚಿತವಾದ ಡವಡವಿಕೆಯೂ ಅತೃಪ್ತರಿಗುಚಿತವಾದ ಆತುರತೆಯೂ ಇರಲಾರವೆಂಬುದಂತೂ ಸಂಪೂರ್ಣ ಸತ್ಯವಷ್ಟೇ?

ಅಂದಬಳಿಕ ಮಾನವೇಚ್ಛೆಯು ಇದಕ್ಕೆ ತುಂಬಾ ವಿಪರೀತವಾಗಿರಬೇಕಾದುದು ಸಯುಕ್ತಿಕವಷ್ಟೇ ? ಹಾಗಾದರೆ 'ಎಲ್ಲಿ ಏನು ಆಗುವುದೋ ಎಂಬ ಡವಡವಿಕೆ' ಮತ್ತು 'ಎಂದೋ ಏನೋ ಎಂಬ ಆತುರತೆ' ಇವೆರಡರ ಗಂಧವಿಲ್ಲದ ಇಚ್ಛೆಗೇ ಸಂಕಲ್ಪ ಅಥವಾ ಕೃತುಶಕ್ತಿಯೆಂದು ನಾವು ಯಾಕೆ ಅನ್ನಬಾರದು ? ಅರವಿಂದರೂ ಕೂಡ "ಈಶನ ಸಂಕಲ್ಪವು ಯತ್ನ ಮತ್ತು ವಾಸನೆ ಇವೆರಡರಿಂದ ಅಲಿಪ್ತವಾಗಿರುವಂತೆಯೇ ನಿನ್ನದೂ ಆಗಬೇಕು" ಎಂಬರ್ಥದ ಮಾತುಗಳನ್ನು "ಯೌಗಿಕ ಸಾಧನ"ದ ಪ್ರಥಮಾಧ್ಯಾಯದಲ್ಲಿ ವಿಶದವಾಗಿ ವಿವೇಚಿಸಿರುವರು.

Will ಎಂಬುದು ಆತ್ಮವಿಶ್ವಾಸಯುಕ್ತ ಆಜ್ಞಾಕಾರಿತ್ವವೆಂದು ಇದೀಗ ಜಗದ್ವ್ಯಾಪಿಯಾಗಿ ಹಬ್ಬುತ್ತಲಿರುವ "New thought movement" ('ನವವಿಚಾರಾಂದೋಲನ') ಎಂಬ ತತ್ವವಾದದ ಗ್ರಂಥಗಳಲ್ಲಿ ಪ್ರತಿಪಾದಿಸಲ್ಪಡುತ್ತಾ ಇದೆಯೆಂಬುದು ತಿಳಿದ ವಿಷಯವೇ ಆಗಿದೆಯಷ್ಟೆ ? ಈ ತತ್ತ್ವವಾದದ ಸಂಕುಚಿತ ಸ್ವರೂಪವನ್ನು ಹೊಡೆದು ಹಾಕಿ ಅದನ್ನೇ ವಿಸ್ತರಿಸಿಬಿಟ್ಟರೆ ಅರವಿಂದರ Will ಎಂಬುದರ ಕಲ್ಪನೆಯು ನಮ್ಮ ಕಣ್ಣಮುಂದೆ ಕಟ್ಟಲಿಕ್ಕೆ ಅಡ್ಡಿಯಿಲ್ಲ.

"**Will, and leave the result to God**" (Y. S.) "ಸಂಕಲ್ಪಿಸು. ಮತ್ತು ಪರಿಣಾಮವನ್ನು ದೇವನ ಕಡೆಗೆ ಬಿಡು" (ಅಥವಾ ಫಲದ ವಿಷಯವು ದೇವ ದೇವನ ಕಡೆಗಿರಲಿ.) ಎಂಬುದು ಅರವಿಂದರ ಯೌಗಿಕಸಾಧನದ ಮೂಲಮಂತ್ರವಾಗಿದೆ. ಇದೇ ನಮ್ಮ ನಾಯಕನಿಗೆ ಈ ವರುಷದ ಅಂತರ್ನಿರ್ದೇಶವಾಗಿರುವದರಿಂದ ಆತನು ಅರವಿಂದರ ಯೋಗದ ತೀರ ಮಹತ್ತ್ವದ ಮೂಲಸೂತ್ರಕ್ಕೀಗ ಬಂದು ಮುಟ್ಟಿದನೆಂಬುದು ಸ್ಪಷ್ಟವೇ ಇದೆ.

ಅರವಿಂದರ "Yoga and its objects" (ಯೋಗದ ಗೊತ್ತು ಗುರಿ) ಎಂಬ ಪುಸ್ತಕದ ಪ್ರತಿಪುಟದಲ್ಲಿ ಕಾಣುವ "Self surrender" (ಆತ್ಮಸಮರ್ಪಣ) ಎಂಬ ಶಬ್ದವು ನಮಗಾ ಪುಸ್ತಕವನ್ನೋದುವಾಗ ಏನೆಂದು ಅರ್ಥವನ್ನು ಕೊಡುತ್ತಿದೆಯೋ ಅದರದೇ ಅತ್ಯಂತ ಆಳವಾದ

ಸ್ವರೂಪವು ಈ "Will" (ಆತ್ಮಸಂಕಲ್ಪ) ಎಂಬ ಶಬ್ದದಲ್ಲಿ ಅಡಕವಾಗಿದೆಯೆಂಬುದನ್ನು ಗ್ರಹಿಸುವುದಕ್ಕೆ ನಮ್ಮ ಬಾಹ್ಯಬುದ್ಧಿಗೆ ಸಾವುಮರ್ಥ್ಯವೇ ಇಲ್ಲವೆಂದು ನನಗೆ ಅನಿಸುತ್ತದೆ. ಹಾಗಾದರೆ Surrender ಎಂಬುದಕ್ಕೆ ಸ್ಥೂಲಸಮರ್ಪಣವೆಂದೂ Will ಎಂಬುದಕ್ಕೆ ಸೂಕ್ಷ್ಮಸಮರ್ಪಣವೆಂದೂ ಅರ್ಥ ಹೇಳಿದರೆ ಏನು ತಪ್ಪು? ಒಂದು ನಿವೃತ್ತಿಪರ, ಇನ್ನೊಂದು ಪ್ರವೃತ್ತಿಪರ ಎಂದು ಅಂದರೂ ಅಡ್ಡಿಯಿಲ್ಲ.

ಇದಿರಲಿ. ಈಗ ಇನ್ನೊಂದು ವಿಷಯವನ್ನು ಒಂದಿಷ್ಟು ಹೇಳಿಕೊಡದೆ ನನಗೆ ಮುಂದೆ ಮಾರ್ಗವಿಲ್ಲ. ಆದುದರಿಂದ ವಾಚಕರು ಸಾವಧಾನದಿಂದ ಆಲೈಸಬೇಕೆಂದು ಹಾರೈಸುವೆ.

ನಮ್ಮ ನಾಯಕನ ದೇಹಪ್ರಕೃತಿಯು ಈಗ ಬಹಳ ದಿನಗಳಿಂದಲೂ ಅಶಕ್ತವಷ್ಟೆ? ಹಾಗಾದರೆ ಆ ವಿಷಯದಲ್ಲಿ ಆತನಿಗೆ ಏನೆಂದು ಅನಿಸುತ್ತಿದ್ದಿರಬೇಕೆಂಬುದೊಂದು ಪ್ರಶ್ನವು ಸಹಜವಾಗಿಯೇ ನಮ್ಮ ತಲೆಯಲ್ಲಿ ಬರುವದಿಲ್ಲವೆ? ಆತನೇನೋ ಏನೋ ದಿನಗಳಿಂದ ಹೀಗೆಂದುಕೊಳ್ಳುತ್ತಲಿದ್ದಾನೆ: ಅತಿ ವ್ಯಾಕುಲತೆಯಿಂದ ಒಳಗಿನ ಅಂಗಾಂಗಳ ಮೇಲೆಲ್ಲಾ ಒಂದು ವಿಧವಾದ ಕಡುಸೆಳೆತವುಂಟಾಗಿರುವದರಿಂದ ತೀರ ಸೂಕ್ಷ್ಮ ಪ್ರದೇಶದಲ್ಲೆಲ್ಲೋ ಬಹಳ ಕೊಂಕುಗಳುಂಟಾಗಿರಲಿಕ್ಕೆಬೇಕು. ಆದುದರಿಂದಲೇ ದೇಹಪ್ರಕೃತಿಯು ಹೀಗೆ ತೀರಾ ಶಿಥಿಲವಾಗಿದೆ. ಅಲ್ಲದೆ 'ಜನ್ಮಕಾಲದಲ್ಲಿ ಪಶ್ಚಿಮ ಕ್ಷಿತಿಜದ ಕೆಳಗೆ ಯುರೇನಸ್ ಎಂಬ ಗ್ರಹ ಐದ್ದರೆ ಡಾಕ್ಟರರಿಗೆ ನೆಲೆ ಹತ್ತದಂಥ ವಿಚಿತ್ರ ರೋಗವುಂಟಾಗುತ್ತದೆ' ಎಂದು ಜ್ಯೋತಿಷ್ಯ ಶಾಸ್ತ್ರದಲ್ಲಿ ಹೇಳಿದುದು ಬೇರೆ ತುಂಬಾ ದಿಟವಾದಂತೆಯೇ ಆಯಿತಲ್ಲಾ" ಎಂದು ಎರಡು ವಿಧವಾಗಿ ಸಮಾಧಾನವನ್ನು ಹಚ್ಚಿಕೊಂಡು ಇದ್ದಾನೆ. ಅಲ್ಲದೆ ತನ್ನ ಎಲ್ಲ ಬಗೆಯ ಇಂದಿನ ಇಳಿತರಕ್ಕೆ ಆತನು ಕಲ್ಪಿಸಿದ ಕಾರಣವಾವುದೆಂದರೆ:— "ಪ್ರಕಟವಾದ ಅಂತಃಶಕ್ತಿಯು ಶಿಶು ಅವಸ್ಥೆಯಲ್ಲಿರುವದರಿಂದ ಅದು ಮೇಲಿಂದ ಮೇಲೆ ನೆಲ ಹಿಡಿಯುವುದು ಸಹಜ. ಅಲ್ಲದೆ ಬಹಳ ವರುಷಗಳಿಂದ ಒಂದು ನಾಡಿನ ಕಡೆಗೆ ಹದತಪ್ಪಿ ಓಡಿ ಓಡಿ ಕೊನೆಗೊಮ್ಮೆ ಇಚ್ಛಿತ ಸ್ಥಳಕ್ಕೆ ಮುಟ್ಟಿದರೆ

ಕೂಡಲೆ ಅಲ್ಲಿ ವಿಶ್ರಮಿಸುತ್ತಿರುವ ಜೀವದ ದಣಿದ ಪ್ರಕೃತಿಕೋಶ ಗಳೆಲ್ಲಾ ಅಂತರ್ಜ್ವರದಿಂದ (ವಿದ್ಯಾರಣ್ಯರ ಪರಿಭಾಷೆಯಿದು) ಪೀಡಿತ ವಾಗುತ್ತಿರಬಹುದೆಂದು ತೋರುತ್ತದೆ. ದಾರೀ ನಡೆದು ನಿಶ್ಚಿತ ಸ್ಥಳಕ್ಕೆ ಮುಟ್ಟಿದ ಮೇಲೆ ಕೆಲ ಹೊತ್ತಿನ ಮೇಲೆ ಕಾಲುಗಳಿಗೆ ಬಾವುಬರುವಂತೆ ಭಗವತ್ಪಥದಲ್ಲಿ ದಿಕ್ಕುಗೆಟ್ಟು ಹೌಹಾರಿ ಓಡಿದ ಅಂತರಂಗಕ್ಕೆ ತನ್ನ ನೆಲೆಗೆ ಸೇರಿದ ಬಳಿಕ ಕೆಲಹೊತ್ತಿನ ಮೇಲೆ ಒಂದು ಬಗೆಯ ದಣಿವು ಉಂಟಾ ಗುತ್ತಿರಲಿಕ್ಕೇಬೇಕು. ಅಂತರಂಗಕ್ಕೆ ಮಾಂದ್ಯವುಂಟಾಗುವುದೆಂದರೆ ಬಾಹಿರಂಗಿಕ ಜೀವನದಲ್ಲಿ ಅಸ್ತವ್ಯಸ್ತತೆಯುಂಟಾಗುವುದು ಅನಿವಾರ್ಯ ವೆಂದೇ ಅರ್ಥ. ಒಳಗಿನ ಅಂಗಗಳಿಗೆ ಸಂಪೂರ್ಣ ವಿಶ್ರಾಂತಿ ದೊರೆತು ಅವುಗಳೆಲ್ಲಾ ಚೆನ್ನಾಗಿ ಬಲಪಡುವವರೆಗೆ ನನ್ನ ಹೊರಗಿನ ಅಸ್ತವ್ಯಸ್ತ ಗಳ ಹೊರಲಾರದ ಹೊರೆ ನನಗೆ ತಪ್ಪಿದ್ದಲ್ಲ "

ಹೀಗೆಂತಲೇ ಆತನ ಘೋರ ರೌದ್ರ ಕಾಲದಲ್ಲಿಯೂ ಕೂಡ ಆತನು ಹೇಗಾದರೂ ಎಲ್ಲಾ ನಿಸ್ತರಿಸಿಕೊಂಡು ಮತ್ತೆ ತಲೆಯೆತ್ತಿಕೊಂಡೇ ನಿಂತಿರುತ್ತಾನೆ. ಇಲ್ಲದಿದ್ದರೆ ಹೆಣಾ ಹಿಟ್ಟಾಗಿ ಹೋಗಿ ಬಹು ದಿನವಾಗ ಬೇಕಾಗಿದ್ದಿತು.

ಇದಲ್ಲದೆ ಅರವಿಂದರ "ಯೌಗಿಕಸಾಧನ" ದಲ್ಲಿ ಇದಕ್ಕನುಗುಣ ವಾದ ವಾಕ್ಯವೊಂದು ನಮ್ಮ ನಾಯಕನಿಗೆ ಈ ಮೊದಲೇ ತನ್ನೆಡೆಗೆ ಆಕರ್ಷಿಸಿಕೊಂಡುಬಿಟ್ಟಿದೆ. ಅದರಿಂದ ಆತನ ಆಂತರಂಗಿಕ ಗಂಭೀರತೆಗೆ ಇನ್ನಿಷ್ಟು ನೆರವಾದಂತಾಗಿದೆ.



೩

ಅಂತರ್ನಿರ್ದೇಶ ಬಂದು ಒಂದು ವಾರ ಕಳೆಯುವದರೊಳಗಾಗಿ ನಮ್ಮ ನಾಯಕನ ಒಬ್ಬ ನೆರೆಯೂರ ಗೆಳೆಯನಿಗೆ ಪ್ಲೇಗು ಬಂದುಬಿಟ್ಟಿತು. ಆ ಗೆಳೆಯನು ಜ್ಞಾನಭಿಕ್ಷುವಿನ ಕೊನೆಯ ಭೆಟ್ಟಿಯನ್ನಪೇಕ್ಷಿಸಿ ಕರೆಕಳಿಸಿದಾಗಲೇ ಹೊರತು ನಮ್ಮ ನಾಯಕನಿಗೆ ಈ ಸಮಾಚಾರವೇ ಗೊತ್ತಾಗಿರಲಿಲ್ಲ. ಮುಗಿಲಲ್ಲಿ ಆಗ ಮೋಡಗಳ ಮುಸುಕು ಹೆಚ್ಚಾಗಿದ್ದ ರಿಂದ ಈತನ ಪ್ರಕೃತಿಯೂ ಬಹಳ ಅಶಕ್ತವಾಗಿದ್ದಿತು. ಅಲ್ಲದೆ ಒಟ್ಟಿಗೆ ಈ ಕೆಲವು ವರುಷಗಳ ಅನಾರೋಗ್ಯದ ಕಾಲದಲ್ಲಿ ಪ್ರವಾಸದ ಪ್ರಸಂಗ ಬಂತೆಂದರೆ ಜೀವದಸುತ್ತೇ ಬಂದಂತಾಗುತ್ತಿತ್ತು. ಆದರೂ ಗೆಳೆಯನ ಕೊನೆಯ ಭೆಟ್ಟಿಗೆ ಜೀವ ಹೇಗೆ ಹಾತೊರೆಯದೆ ಬಿಟ್ಟೀತು? ಮಾವಿನ ತೋಪಿನಲ್ಲಿ ಈಗ ಜ್ಞಾನಭಿಕ್ಷುವು ಇರುತ್ತಿದ್ದನೆಂಬುದು ಸಿಮುಗೆ ಮೊದಲೇ ಗೊತ್ತಿದ್ದ ವಿಷಯು. ಆವೊತ್ತೇ ಮತ್ತೆ ಕೆಲ ಗೆಳೆಯರು ಭೆಟ್ಟಿಗೆ ಬಂದಿದ್ದರು. ಅವರ ಕಡೆಯಿಂದ ಮನೆಗೆ ಹೇಳಿ ಕಳಿಸಿ ತೋಪಿನಿಂದ ಅತ್ತಿಂದತ್ತಲೇ ಎತ್ತಿನ ಬಂಡಿಯಲ್ಲಿ ಕುಳಿತು ಗೆಳೆಯನೂರಿಗೆ ಹೋಗಿ ಬಿಟ್ಟನು. ರಾತ್ರಿಯ ಆ ಬೈಲಬಂಡಿಯ ಪ್ರವಾಸ ಮತ್ತು ಅಲ್ಲಿಯ ವಿಷಮ ಪರಿಸ್ಥಿತಿಯಲ್ಲಿ ಉಂಟಾದ ದೇಹಾಯಾಸ ಮತ್ತು ಅಕಾಲ ವೃಷ್ಟಿಯ ಮಬ್ಬುಹವೆಯ ಪರಿಣಾಮ ಇವೆಲ್ಲವುಗಳ ಮೂಲಕ ನಮ್ಮ

ನಾಯಕನಿಗೆ ಮರುದಿನ ಅಲ್ಲಿಯೇ ಜ್ವರಗಳು ಬಂದುಬಿಟ್ಟವು. ಅತ್ತ ಗೆಳೆಯನ ದೇಹಾಂತ. ಆಯಿತು ಅಲ್ಲಿಂದ ಹಾಗೇ ತಿರುಗಿ ಊರಿಗೆ ಹೊರಟನು. ಪ್ಲೇಗಿನ ಸಂಸರ್ಗದ ಸಂಶಯವು ಅಲ್ಲಿಯವರಿಗೆಲ್ಲ ಬಂದು ಬಿಟ್ಟಿತು. ಸ್ವತಃ ಜ್ಞಾನಭಿಕ್ಷುವಿಗೂ ಹಾಗೇ ಅನಿಸಿತು. ಆಗ ಜ್ಯೋತಿಷ್ಯದ ಯೋಗವೂ ಕಟುತರವಾದ ದೈಹಿಕ ಅನಾರೋಗ್ಯವನ್ನು ಸೂಚಿಸುತ್ತಿದ್ದಿತು. ಆಗ ನಮ್ಮ ನಾಯಕನ ಮನದಲ್ಲಿ ನಡೆದ ವಿಚಾರ ಗಳ ತಾಕಲಾಟ ಹೇಗೆಂದರೆ— "ನಾನು ಹೀಗೇ ಮನೆಗೆ ಹೋದರೆ ರೋಹಿಣಿ ಮುಂತಾದವರಿಗೆಲ್ಲಾ ಇದು ಪ್ಲೇಗೇ ಹೌದೆಂಬುದು ಗೊತ್ತಾಗುವದರಿಂದ ಅವರ ದುಃಖಕ್ಕೆ ಪಾರಾವಾರವೇ ಉಳಿಯುವದಿಲ್ಲ. ನನಗೆ ಅದನ್ನು ಸಹಿಸಲಾಗುವದಿಲ್ಲ. ನನ್ನ ತಾಳ್ಮೆಯನ್ನುಳಿಸುವ ಸಲು ವಾಗಿಯಾದರೂ ನೀವು ಅಳಬೇಡಿರೆಂದು ಹೇಳುವುದು ಅನ್ಯಾಯ. ಯಾಕೆಂದರೆ ಅವರ ದುಃಖವು ಅವರನ್ನು ಹಿಂಡಿ ಹಿಪ್ಪೆಮಾಡುತ್ತಿರುವಾಗ ಅವರಿಗೇ ನುಂಗಿಕೊಳ್ಳಿರೆಂದು ಹೇಳುವುದು ಸೃಷ್ಟಿನಿಯಮಕ್ಕೆ ವಿಪರೀತ ವಾದದ್ದು. ಹಾಗಾದರೆ ಇನ್ನೇನು ಮಾಡಬೇಕು? ಈ ಪಿಡುಗಿನಲ್ಲಿ ಮರಣಬರಲಿಕ್ಕೆ ಸುಮಾರು ಐದಾರು ದಿನಗಳ ಕಾಲವು ಬೇಕಾಗುತ್ತದೆ. ಅದರಲ್ಲಿ ಕೊನೆಯ ಎರಡು ಮೂರು ದಿವಸ ಮೈಮೇಲೆ ಪ್ರಜ್ಞೆಯೇ ಇರುವದಿಲ್ಲ. ಏನಾದರೂ ಹಂಚಿಕೆ ಮಾಡಿ ಮೊದಲಿನ ಮೂರು ದಿನಗಳ ವರೆಗೆ ಯಾರಿಗೂ ಗೊತ್ತಾಗದಂತೆ ಅಡವಿಯಲ್ಲೇ ಕಾಲಕಳೆಯಬೇಕು. ಅಂದರೆ ಎಲ್ಲಾ ಸರಿಹೋಗಿಬಿಡುತ್ತದೆ." ಹೀಗೆಂದವನೇ ಬಂಡಿಯನ್ನೇರಿ ಊರ ಹಾದೀ ಹಿಡಿದನು. ಬಂಡೀ ಹೊಡೆಯುವ ಆಳಿಗೆ ಈ ಸಮಾಚಾರವೇ ತಿಳಿದಿರಲಿಲ್ಲ. ಆದುದರಿಂದ ಅದೂ ಒಂದು ಒಳ್ಳೆಯದೇ ಆಯಿತು. ಊರು ಸಮೀಪಕ್ಕೆ ಬಂದಮೇಲೆ ಜ್ಞಾನಭಿಕ್ಷುವು ಬೇಕೆಂತಲೇ ಮೊರೆಯಮೇಲೆ ಒಳ್ಳೇ ಹುರುಪಿನ ಲಕ್ಷಣವನ್ನು ತಂದುಕೊಂಡು ಅಲ್ಲೇ ಅಗಸಿಯ ಬಳಿಯಲ್ಲಿ ಆಡುತ್ತಿದ್ದ ಹುಡುಗರಿಗೆ ಹೇಳಿ ಗೆಳೆಯರನ್ನೂ ಮಡದಿ ಮಕ್ಕಳನ್ನೂ ಊರಹೊರಗೇ ಕರೆಯಿಸಿ, ಅವರಿಗೆ ತೀರಿಕೊಂಡಿದ್ದ ಗೆಳೆಯನ ಸಮಾಚಾರವನ್ನೆಲ್ಲ ಹೇಳಿ ತನ್ನ ಬಾಡಿಯನ್ನು ಮುಂದೆ ಹಾಗೇ

ತೋಪಿನ ಕಡೆಗೆ ಮುಂದುವರಿಸಿದನು. ಅಲ್ಲಿ ಒಬ್ಬ ಆಳು. ವೈಗಳ್ಳ ತನದ ಕಳಸ. ಕೆಲಸಹೇಳದಿದ್ದರೆ ಸಾಕೆನ್ನುವವನು. ನಮ್ಮ ನಾಯಕ ನಿಗೂ ಅಷ್ಟೇ ಸಾಕಾಯಿತು. 'ಪ್ರವಾಸದಿಂದ ಸ್ವಲ್ಪ ಹೆಚ್ಚು ಶ್ರಮ ವಾಗಿದೆ, ಇಷ್ಟೇ.' ಎಂದು ಅವನಿಗೆ ಹೇಳಿ ಈತನು ಗುಡಿಸಲ ಸೇರಿ ಬಿಟ್ಟನು. 'ಮೊದಲೇ ಅಶಕ್ತ. ಅದರಲ್ಲಿ ಅಕಾಲ ಪ್ರವಾಸ. ಆದುದರಿಂದ ಇವನು ಅನ್ನುವದು ಸತ್ಯವೇ ಆಗಿದ್ದೀತು' ಎಂದು ತಿಳಿದುಕೊಂಡು ಈತನ ಇನ್ನಾವಗೊಡವೆಗೂ ಅವನು ಬರಲಿಲ್ಲ. ಅವನು ಹಗಲು ಹೊತ್ತು ಮಾತ್ರ ಕೆಲಸಕ್ಕೆ ಬರುವ ಆಳು. ಇರುಳಲ್ಲಿ ನಮ್ಮ ನಾಯಕ ನೊಬ್ಬನೇ. ಆದುದರಿಂದ ದೈಹಿಕ ರೀತಿಯಿಂದ ಎಷ್ಟೇ ಅಪರಿಮಿತ ಕಷ್ಟವಾದರೂ ಮನಸ್ಸಿಗೆ ಎಷ್ಟೂ ತೊಂದರೆಯಿಲ್ಲದೆ ಮೂರು ದಿನಗಳು ಕಳೆದವು. ಆದರೆ ಇಷ್ಟೊತ್ತಿಗೆ ನೆರೆಹೊರೆಯ ಹೊಲದ ಒಕ್ಕಲಿಗರಿಗೆ–ಈತನು ಪ್ಲೇಗಿನೂರಿಗೆ ಹೋಗಿ ಬಂದವನೇ ಗುಡಿಸಲು ಹೊಕ್ಕಿದ್ದಾನೆಂಬುದು ಗೊತ್ತಾಗುತ್ತಲೇ ಅವರು 'ಈತನಿಗೆ ಪ್ಲೇಗು ಬಂದದ್ದೇ ನಿಶ್ಚಯ' ವೆಂದು ನಿರ್ಧರಿಸಿ ಊರಲ್ಲೆಲ್ಲ ಸುದ್ದಿಯನ್ನು ಹಬ್ಬಿಸಿಬಿಟ್ಟರು. ಕೂಡಲೆ ರೋಹಿಣಿಯು ಒಂದು ಬಂಡಿಯನ್ನು ತೆಗೆದುಕೊಂಡು ತನ್ನ ಇನಿಯ ನನ್ನು ಕರೆದೊಯ್ಯಲು ಬನಕ್ಕೆ ಬಂದಳು. ಆಗ ಅವಳಿಗೆ ಭಾರೀ ಕಣ್ಣು ಬೇನೆ. ಅಲ್ಲದೆ ಮಗುಗಳೆಲ್ಲವುಗಳದೂ ಅದೇ ಹಾಡು. ಇತ್ತ ಮಂಜುಳನ ಸುತ್ತಲೂ ಅದೇ ಗೋಳಿನದೊಂದು ಮಗು. ಅಂತೂ ಅಂದು ಮನೆಗೆ ಪಯಣ ಮತ್ತು ಅಲ್ಲಿ ಗೆಳೆಯರೆಲ್ಲರ ಸಂದಣಿ. ಇಷ್ಟಾದರೂ ನಮ್ಮ ನಾಯಕನು ಪ್ಲೇಗೆಂಬ ಶಂಕೆ ಅವರಾರಿಗೂ ಬರಲಾರದಂತೆಯೇ ನಟಿಸಿ ಬಿಟ್ಟನು. ಹೀಗೇ ಮತ್ತೆ ಒಂದೂವರೆ ದಿನ ಕಳೆಯಿತು. ಏನಾದರೊಂದು ನೆವ ಮಾಡಿ ಯಾರನ್ನೂ ಸಮೀಪಕ್ಕೆ ಬರಗೊಡುತ್ತಿದ್ದಿಲ್ಲ. ಯಾಕೆಂದರೆ ನಮ್ಮ ನಾಯಕನ ಸಿದ್ಧಾಂತದ ಜಾತಿಯೇ ಒಂದು ವಿಲಕ್ಷಣ ಪ್ರಕಾರದ್ದು. "ಬರುವದೇನಿದೆಯೋ ಅದು ಬಂದೇ ಬರುತ್ತಿರುತ್ತದೆ. ಆದರೂ ನಮ್ಮ ಬುದ್ಧಿಯ ಉಪಯೋಗವನ್ನು ನಾವು ನಿರಾಸಕ್ತರಾಗಿ ಮಾಡಿಕೊಳ್ಳಲೇಬೇಕು." ನಮ್ಮ ನಾಯಕನ ಚತುರ್ಮುಖ ಸಿದ್ಧಾಂತದ ಪರಿಣಾಮವಿದು.

ಆ ಮೇಲೆ ಕೊನೆಗೆ ಮಂಜುಳ ಮತ್ತು ಬೇರೆ ಇಬ್ಬರು ಪ್ರೌಢರಾದ ಜೀವದ ಗೆಳೆಯರು ಈ ಮೂವರಿಗೇ– ಅದೂ ರೋಹಿಣಿಯು ಯಾತಕ್ಕೋ ಹೊರಗೆ ಹೋದ ಸಂಧಿಯನ್ನು ಸಾಧಿಸಿ–ತನ್ನ ಸತ್ಯ ಸಮಾಚಾರವನ್ನೆಲ್ಲ ಅರುಹಿದನು. ಆಯಿತು ಗೆಳೆಯರ ಹೊಟ್ಟೆಯಲ್ಲಿ ಹೊರಗೆಡವಲಾಗದ ಕಿಚ್ಚು, ಇತ್ತ ರೋಹಿಣಿಯ ಮುಗ್ಧಾಂತಃಕರಣದ ಅರಿಯದ ಸಮಾಧಾನ. ಇವೆರಡರ ನಡುವೆ ನಮ್ಮ ನಾಯಕನಿಗೆ ವಿಚಿತ್ರ ಆಶ್ಚರ್ಯ. ಗೆಳೆಯರ ಇಳಿದ ಮೊಗನೋಡಿ "ನಿರುಪಾಯ!" ಎಂದುಕೊಳ್ಳುತ್ತಾನೆ; ಅತ್ತ ಮಡದಿಯ ಮುಗ್ಧ ನಿಶ್ಚಿಂತೆಯನ್ನು ನೋಡಿ "ಅಯ್ಯೋ ಪಾಪ!" ಎಂದೆನ್ನುತ್ತಾನೆ. ತನ್ನ ವಿಷಯದಲ್ಲೋ "ಜಾತಸ್ಯ ಮರಣಂ ಧ್ರುವಂ" ಎನ್ನುತ್ತಾನೆ. ಹೀಗೊಂದು ವಿಚಿತ್ರವಾದ ಅಲಕಮಲಕಿನ ವ್ಯೂಹದಲ್ಲಿ ಅವನ ಮನಸ್ಸು ಸುತ್ತಾಡಹತ್ತಿತ್ತು. ಆಗ ಏಕಾಂತದಲ್ಲಿ ಗೆಳೆಯರು ಆತನಿಗೆ ಕೇಳಿದುದೇನೆಂದರೆ— "ಡಾಕ್ಟರರನ್ನು ಕರೆಯಿಸಿದರೆ ಪ್ರಯೋಜನವಾಗಲಿಕ್ಕಿಲ್ಲವೇನು?" ಆ ಮಾತಿಗೆ ಜ್ಞಾನಭಿಕ್ಷುವು— "ಪ್ಲೇಗು ಅಂಟುವ ಮೊದಲು ಉಪಾಯವನ್ನು ಮಾಡುವುದಕ್ಕೆ ಅವರಿಗೆ ಶಕ್ಯವಿದೆಯೇ ಹೊರತು, ಅಂಟಿದ ಮೇಲೆ ಅದನ್ನಡಗಿಸುವುದಕ್ಕೆ ಅವರಿಗೆ ಅಂತಹ ಬಲವಾದ ಉಪಾಯಗಳು ಇನ್ನೂ ಸಿಕ್ಕಿಲ್ಲವೆಂದು ತೋರುತ್ತದೆ. ಆದರೆ ನಾನು ಚತುರ್ಮುಖ ಸಿದ್ಧಾಂತಿಯಾಗಿರುವದರಿಂದ— ಆದರೂ ಸರಿ–ಬಿಟ್ಟರೂ ಸರಿಯೆಂದು ಹೊಳೆದ ಉಪಾಯಗಳನ್ನು ಮಾಡಿಯೇ ನೋಡಬೇಕೆನ್ನುವವರಿಗೆ ನಾನು ಪ್ರತಿಬಂಧವನ್ನುಂಟುಮಾಡಲಾರೆ— ಎಂದನು.

ಆಯಿತು, ಕೂಡಲೆ ಆಪ್ತೇಷ್ಟರೊಳಗಿನವನೊಬ್ಬನೊಡನೆ ಗುಪ್ತ ಪತ್ರವೊಂದನ್ನು ಕೊಟ್ಟು ನೆರೆಯ ಪಟ್ಟಣದ ಗೆಳೆಯರಕಡೆಗೆ ಕಳುಹಿದರು. ಮರುದಿನವೆನ್ನುವಷ್ಟರಲ್ಲಿ ಅಲ್ಲಿಯ ಗೆಳೆಯರು ಹೌಹಾರಿ ಡಾಕ್ಟರರನ್ನು ಕರೆದುಕೊಂಡು ಬಂದುಬಿಟ್ಟರು. ಆದರೆ ಬರುವಾಗ ಹಾದಿಯಲ್ಲಿ ಭೆಟ್ಟಿಯಾದವರಿಗೆಲ್ಲ ಒಂದೇ ಪ್ರಶ್ನೆ: "ನಿಮ್ಮ ಊರಲ್ಲಿ ಇಂದು ಏನಾದರೂ

ಕೆಟ್ಟ ಸಮಾಚಾರವಿದೆಯೇನು?" ಆದರೆ ಯಾರಿಂದಲೂ ಅಂಥ ಉತ್ತರ ವಿಲ್ಲದ್ದರಿಂದ ಇದ್ದುದ್ದರಲ್ಲೇ ಎಷ್ಟೋ ಸಮಾಧಾನವನ್ನು ಹಚ್ಚಿಕೊಂಡು ಬಂದು ಮನೆಯ ಬಾಗಿಲನ್ನು ಪ್ರವೇಶಿಸಿದರು. ಎಲ್ಲರಿಗೂ ಒಂದು ಬಗೆಯ ವಿಲಕ್ಷಣ ಭಾವ. ಆದರೆ ಡಾಕ್ಟರರು ರೋಗಿಯನ್ನು ಪರೀಕ್ಷಿಸಿ ನೋಡಿ "**ಇದು ಪ್ಲೇಗೇ ಅಲ್ಲ, ಮಲೇರಿಯಾ.**" ಎಂದು ಅಂದ ಕೂಡಲೆ ಸಕಲ ಗೆಳೆಯರು "ಆಹಾ! ನಮ್ಮ ಗೆಳೆಯನಿಗೆ ಇಂದು ಪುನಃ ಜನ್ಮವಾಯಿತು!!" ಎಂದು ಹರುಷದಲ್ಲಿ ಓಲಾಡಿದರು!

ಡಾಕ್ಟರರು ಇಂಜೆಕ್ಶನ್ ಕೊಟ್ಟು ಹೋದ ಮೇಲೆ ಗಕ್ಕನೆ ಜ್ವರ ಗಳೆಲ್ಲ ಇಳಿದುಬಿಟ್ಟವು. ಆಗ ಇದೆಲ್ಲಾ ಒಳ ಕುಟಿಲಾಟ ತಿಳಿದದ್ದರಿಂದ ರೋಹಿಣಿಯು ತನ್ನ ನಲ್ಲನಿಗೆ ಹೀಗೆಂದಳು—"ಆಹಾ! ನೀವು ಎಂಥಾ ವಿಶ್ವಾಸಘಾತುಕರು! ಒಳಗೆ ಇಂಥಾದ್ದೆಲ್ಲಾ ಮುಚ್ಚಿಟ್ಟುಕೊಂಡು ಮೇಲೆ ನನ್ನನ್ನು ನಗಿಸುತ್ತಲೇ ಇರಬೇಕೇ?????" ಅದಕ್ಕೆ ಆತನು "ಆಯಿತು–ಆದದ್ದಾಗಿ ಹೋಯಿತು! ಕೊನೆಗೆ ಈಶ್ವರನು ನಿಮ್ಮೆಲ್ಲರ ಮೊರೆಯನ್ನು ಕೇಳಿ ನಿಮ್ಮ ವಸ್ತುವನ್ನು ನಿಮಗೆ ಬಿಟ್ಟುಗೊಟ್ಟನು! ಸಾಕು ಇಷ್ಟೇ ದೊಡ್ಡದು!" ಎಂದು ತನ್ನ ನಚ್ಚಿನ ಸತಿಯನ್ನು ಸುಖವಚನಗಳಿಂದ ರಂಬಿಸಿದನು.

ಇಂದು ಜ್ವರಗಳು ಇಳಿದದ್ದು ಮುಂದೆ ಬಾಗಿಲ ಹೊರಗೆ ಹೆಜ್ಜೆ ಯಿಡಲಿಕ್ಕೆ ಎರಡು ತಿಂಗಳು ಹಿಡಿಯಿತು! ಎರಡು ಮೂರು ವರುಷ ಗಳಿಂದ ಒಂದೇ ಸವನೆ ಬೆಳೆದು ಬಂದ ಅಶಕ್ತತೆಯಲ್ಲಿ ಪುನಃ ಇಂಥ ದೊಡ್ಡ ಜಡ್ಡೆಂದರೆ ಹೀಗಾದುದೇನೂ ಆಶ್ಚರ್ಯವಲ್ಲ. ಆದರೆ ಇಲ್ಲಿ ಜ್ಞಾನಭಿಕ್ಷುವಿನ ಅಂತಃಕರಣದಲ್ಲಿ ಮತ್ತೊಂದು ಹೊಸ ಮಾತು ಆಳವಾಗಿ ನೆಟ್ಟುಬಿಟ್ಟಿತು. ಅದೇನೆಂದರೆ—"ಪ್ಲೇಗೆಂಬ ಸಂದೇಹ ಬಂದಿರ ದಿದ್ದರೆ ಡಾಕ್ಟರರನ್ನು ಕರೆಯಿಸುವ ಕಾರಣವಿರುತ್ತಿರಲಿಲ್ಲ. ಅವರು ಬಂದಿರದಿದ್ದರೆ ತಾನಾಗಿ ಮಲೇರಿಯಾ ಸರಿಯುವುದಕ್ಕೆ ಇನ್ನೂ ಹೆಚ್ಚು ಕಾಲವು ಬೇಕಾಗುತ್ತಿದ್ದಿತು. ಈಗ ಇಷ್ಟು ಬೇಗನೆ ಕಸಾರಿಕೆಯನ್ನು ತಡೆದು ನಿಲ್ಲಿಸಿದ್ದರೂ ಅದರ ಅಶಕ್ತತೆ ತುಂಬಿಬರಲಿಕ್ಕೆ ಮುಂದೆ

ಇಷ್ಟೊಂದು ಕಾಲವು ಹಿಡಿಯಿತು. ಆದರೆ ಹಾಗೇ ಬಿಟ್ಟುಗೊಟ್ಟಿದ್ದರೆ ಇನ್ನೇಸು ತಿಂಗಳು ಹಾಗೇ ಕೊಳೆಯಬೇಕಾಗುತ್ತಿದ್ದಿತೋ ಯಾರು ಬಲ್ಲರು! ಇದರ ಮೇಲಿಂದ ನಮ್ಮ ತಪ್ಪುತಿಳುವಳಿಕೆಯಿಂದಲೂ ನಮಗೆ ಹಿತವೇ ಆಯಿತೆಂದಂತಾಗಲಿಲ್ಲವೆ? ಇದೊಂದು ಹೊಸ ಅನುಭವವೇ ಸರಿ!"

ಇಲ್ಲಿ ನಮ್ಮ ವಾಚಕರಿಗೆ ಒಂದು ಮಾತಿನ ಕಡೆಗೆ ಸ್ವಲ್ಪ ಕರೆದೊಯ್ಯುವೆ. ಅದೇನೆಂದರೆ—"ಏನು ಆಗುವುದೆಲ್ಲಾ ನಮ್ಮ ಹಿತಕ್ಕೇ ಆಗುತ್ತದೆ" ಎಂಬುದು ಶಾಂತಿಮಂತ್ರಗಳಲ್ಲಿ ಇದೂ ಒಂದಾಗಿದೆ. ಸದ್ಯದ ಕಾಲದಲ್ಲಿ ಮಹಾತ್ಮಾ ಗಾಂಧಿಯವರೂ, ಮಾರಿಸ್ ಮೆಟರ್‌ಲಿಂಕರೂ ಈ ಅನುಭವರಸಾಯನವನ್ನು ಉಂಡು ಉಸುರುವ ಕಡುಗಲಿಗಳು. "ಜಗತ್ತಿನಲ್ಲಿ ದುಃಖದ ಅಸ್ತಿತ್ವವೇಕೆ?" ಎಂಬ ಪ್ರಶ್ನೆಗೆ ಇದು ಪರಮ ಸಿದ್ಧೌಷಧ. ಅರವಿಂದರ ಪೂರ್ಣ ಯೋಗಕ್ಕೆ ಇದು ವಜ್ರಕವಚ! ಇಂಥ ದಿವ್ಯಾಮೃತದ ಒಂದು ಹನಿಯಾದರೂ ಯಾವನಿಗೆ ತನ್ನ ಸ್ವತಃದ ಜೀವನದಲ್ಲಿ ಲಭಿಸುವದೋ ಅವನ ಕಗ್ಗತ್ತಲೆಯ ಕಾಡುದಾರಿಗೆ ಅದೊಂದು ಕೈದೀಪ.

ಇದೀಗ ಒಂದು ನಿರೀಕ್ಷಣದ ವಿಷಯವನ್ನು ನಿಮಗೆ ಹೇಳುವೆ. ಕೇಳಿರಿ—ನಮಗೆ ನಮ್ಮ ಇಂದಿನ ವಿಚಾರಗಳು ಬಹಳೇ ಪಕ್ವವಾದವುಗಳಾಗಿ ತೋರುತ್ತಿವೆ. ನಿನ್ನೆ ಮೊನ್ನಿನ ಕೆಲವು ಸಂಗತಿಗಳನ್ನು ಕುರಿತು ಇಂದು ನಮ್ಮದು ನಾವೇ ಒಳಗೊಳಗೆ ನಾಚಿ ನಗುತ್ತಿರುತ್ತೇವೆ. ಆದರೆ ಅಂದಿನ ದಿನವೇ ನಮಗೆ ಅಂದಿನ ಆ ವಿಚಾರಗಳ ಬಗೆಗೆ ಹೇಗೆ ಅನಿಸುತ್ತಿತ್ತು? ಅದೇ ಸರಿಯೆಂದು ಆಗ ನಾವು ಭಾವಿಸಿದ್ದೆವು. ಆ ಹೊತ್ತು ಅದಕ್ಕಿಂತ ಹಿಂದಿನ ದಿನಗಳ ವಿಚಾರದ ಬಗೆಗೆ ಮಾತ್ರ ನಮಗೆ ನಾಚಿಕೆಯಾಗುತ್ತಿದ್ದಿತು. ಹೀಗೆಯೇ ನಾವು ಎಷ್ಟೆಷ್ಟು ಹಿಂದ ಹಿಂದಕ್ಕೆ ಹೋದರೆ ಅಷ್ಟಷ್ಟೂ ಹೆಚ್ಚು ಹೆಚ್ಚು ನಮ್ಮ ಹುಚ್ಚುತನವನ್ನು ಸ್ಪಷ್ಟವಾಗಿ ಕಾಣುವೆವು. ಹಾಗಾದರೆ ಇನ್ನು ಮುಂದೆಯೂ ಹೀಗೆಯೇ ಆಗಲಾರದೇಕೆ? ಈಗ ನಮಗೆ ನಮ್ಮ ಇಂದಿನ ಆಚಾರವಿಚಾರಗಳು

ಸಯುಕ್ತಿಕವಾಗಿ ತೋರುತ್ತಾ ಇವೆ. ಆದರೆ ಮುಂದೆ ಕೆಲದಿನಗಳಲ್ಲಿ ಇವೇ ಹುಚ್ಚುಚ್ಚಾಗಿ ಯಾಕೆ ಕಾಣಿಸಲಿಕ್ಕಿಲ್ಲ? ಹಾಗಾದರೆ ಈಗೇನು ಅನ್ನುವುದು? ಇಂದಿನ ನಮ್ಮ ಸಯುಕ್ತಿಕವಾಗಿ ತೋರುವ ಅವಸ್ಥೆಯು ಹಿಂದಿನ ಆ ಅಯುಕ್ತಿಕದ ರಾಶಿಯೊಳಗಿಂದಲೇ ಉದಯಿಸಿದೆಯಲ್ಲವೆ? ಆದರಂತೆ ಇಂದಿನದು ನಾಳೆ, ನಾಳಿನದು ನಾಡದು, ಈ ವರುಷದ್ದು ಮುಂದಿನ ವರುಷ, ಆ ವರುಷದ್ದು ಅದರ ಮುಂದಿನ ವರುಷ ಹೀಗೇ ಹುಚ್ಚುಚ್ಚಾಗಿಯೂ ನಾಚಿಕೆ ಹುಟ್ಟಿಸುವಂತಹದಾಗಿಯೂ ತೋರಬಹುದಾದ ಸಂಭವವು ಇದ್ದೇ ಇದೆಯಾದರೂ ಇಂದಿನ ಅಯುಕ್ತಿಕವೂ ಕೂಡ ಮುಂದಿನ ಸಯುಕ್ತಿಕದ ಜನನಿಯೇ ಸರಿಯೆಂದು ಇದೀಗ ನಾವು ಧಾರಾಳವಾಗಿ ಹೇಳಬಹುದಲ್ಲವೇ? ಒಟ್ಟಿಗೇನು? ಸಾಧಾರಣ ಸಯುಕ್ತಿಕದಿಂದ ವಿಶೇಷ ಸಯುಕ್ತಿಕಕ್ಕೆ ಅಥವಾ ಕ್ಷುದ್ರ ಸಯುಕ್ತಿಕದಿಂದ ವಿಶಾಲ ಸಯುಕ್ತಿಕಕ್ಕೆ ಮುಂದುವರಿಯುವುದೇ ನಮ್ಮ ಜೀವನ ತರಂಗಿಣಿಯ ಗಮನದಿಶೆಯೆಂಬುದು ಸ್ಪಷ್ಟವೇ ಅಲ್ಲವೇ?

ಈ ಮಾತಿನ ವಿಷಯದಲ್ಲಿ ಅರವಿಂದರು ಏನು ಹೇಳುತ್ತಿದ್ದಾರೆಂಬುದನ್ನು ಇಲ್ಲಿ ಒಂದಿಷ್ಟು ನೋಡಬನ್ನಿರಿ—

"ಮಾನವಬುದ್ಧಿಯು ತಪ್ಪಿಗೆ ಬಹಳೇ ಹೆದರುವದು; ಅದಕ್ಕೆ ಕಾರಣವಿದೆ:— ಅದರ ನಿಶ್ಚಯದ ರೀತಿಯಲ್ಲಿ ಅಪಕ್ವತೆಗೆ ಎಡೆ ಬಹಳ; ಅದಕ್ಕೆ ದೊರೆತಷ್ಟೆ ಜ್ಞಾನದಿಂದ ಅಸಿವಸಿಯಲ್ಲಿ ಅದು ಸಿದ್ಧಾಂತಕಟ್ಟಲು ಹೆಣಗಾಡುವದು. ನಮ್ಮ ಆತ್ಮಾನುಭವವು ಬೆಳೆದಹಾಗೆಲ್ಲ ನಮ್ಮ ತಪ್ಪುಗಳೂ ಅಗತ್ಯವಾದ ಸತ್ಯಚೇಷ್ಟೆಗಳೆಂದು ಕಂಡುಬರುವದು; ಅಣುರೂಪವಾಗಿ, ಸೂಚಕವಾಗಿ, ದಿಗ್ದರ್ಶಕವಾಗಿ ಸತ್ಯವು ಅವುಗಳಲ್ಲಿರುವದು. ಸತ್ಯಶೋಧನೆಯಲ್ಲಿ ತಪ್ಪು ಇದು ಪ್ರಯತ್ನಪ್ರಚೋದಕವು; ನಮ್ಮ ಪೂರ್ವದ ನಿಶ್ಚಯಗಳೂ ಸಿದ್ಧಾಂತಗಳೂ ಸುಳ್ಳಾದರೂ ಜ್ಞಾನದ ಬೆಳವಣಿಗೆಯಲ್ಲಿ ಅವುಗಳಿಗೆ ತಾತ್ಪೂರ್ತಿಕ ಸಾಧಾರತೆ ಇಲ್ಲದೆ ಇರುವದಿಲ್ಲ."

---

೪

ಈಗ ಅಡ್ಡಜಡ್ಡು ಸಂಪೂರ್ಣ ಗುಣವಾಗಿದೆ. ಮೂಲ ಅಶಕ್ತತೆಯು ಇದ್ದುದಕ್ಕಿದ್ದಹಾಗೆಯೇ ಇದೆಯೆಂದು ಇನ್ನು ಪುನಃ ಪುನಃ ಪುನರುಚ್ಚಾರಣೆಯನ್ನು ಮಾಡುತ್ತ ವಾಚಕರನ್ನು ಬೇಸರಕ್ಕೀಡುಮಾಡುವುದು ಬೇಡ. ಇದೀಗ ಅವನ ಹೊತ್ತುಗಳೆಯುವ ಸಾಧನವೆಂದರೆ ಪುಸ್ತಕ ಪೂಜೆ. ಕೆಲದಿನ ಅಧ್ಯಾತ್ಮ, ಕೆಲದಿನ ಜ್ಯೋತಿಷ್ಯ, ಕೆಲದಿನ ಕಾವ್ಯ, ಇನ್ನುಳಿದ ತುಸುದಿನ ವಿವಿಧಸಂಕೀರ್ಣ ವಿಷಯಗಳು. ಈ ಚಕ್ರವು ತಿರುತಿರುಗಿ ಒಂದೇ ಸವನೆ ಸುತ್ತುತ್ತಿರುವದು. ವಿಭಾಗಗಳು ಏಸೇ ಇದ್ದರೂ ಅವುಗಳಲ್ಲೆಲ್ಲಾ ಲಕ್ಷಿಸುತ್ತಿದ್ದುದು ಒಂದೇ ಒಂದೆಂದರೆ ಅವೆಲ್ಲವುಗಳ ಆಂತರಿಕ ಸತ್ಯವನ್ನೇ. ಈ ಮಹಾಪೂಜೆಯಲ್ಲಿಯ ಫಲಾಶೆಯೆಂದರೆ ತನ್ನ ಅಂತರಂಗದ ಗರ್ಭಗುಡಿಯೊಳಗಿನ ಹಣತೆಯ ದೀಪದ ಬೆಳಕು ಮಂದವಾಗದಿರಬೇಕೆಂಬುದೊಂದೇ. ಆದರೆ ಬೆಳಕು ಮಂದಯಿಸ ಬಾರದೆಂಬ ಆಶೆ ಬೌದ್ಧಿಕವಲ್ಲ, ಅದೊಂದು ಜೀವದ ಒಳಬಳಗಿನ ಕುತ್ತು ಸುಲು, ಆರ್ತಸ್ವರ. ಹೀಗೆಂದರೇನು ? ಬೆಳಕು ಮಂದಯಿಸಿದ ಹಾಗೆ ಕಷ್ಟಸಹಿಷ್ಣುತೆಯ ಪರಿಘವು ತೀರ ಸಂಕುಚಿತವಾಗುವುದು, ಬೆಳಕು ಹೆಚ್ಚಿದ ಹಾಗೆಲ್ಲಾ ಆ ಪರಿಘವೂ ವಿಸ್ತೃತವಾಗುವದು. ತಾಳ್ಮೆತಪ್ಪುತ್ತ ಬಂದ ಹಾಗೆಲ್ಲಾ ಆ ದೀಪವನ್ನು ಥಾಳಿಸಬೇಕೆಂಬ ಸಂಕಲ್ಪವು ಜೀವದಲ್ಲಿ

ಒತ್ತರಿಸಿ ಬಿಡುವದು. ಒಮ್ಮೊಮ್ಮೆ ಜೀವವು ಒಳ್ಳೇ ಕಸವಿಸಿಯಲ್ಲಿ ಬಿದ್ದು ಒದ್ದಾಡುತ್ತಿದ್ದಾಗ ಆತನು ತನ್ನ ಒಳಗೆ ಹಣಿಕೆ ಹಾಕಿ—"ಎಲಾ, ಏನೆನ್ನುವಿ? ದೇವದೇವನ ಅಸ್ತಿತ್ವ ಹಾಗೂ ಅನುಗ್ರಹದ ವಿಷಯದಲ್ಲಿ ಸಂದೇಹಪಡುತ್ತಿರುವಿಯೇನು?" ಎಂದು ತನಗೇ ತಾನು ಕೇಳುತ್ತಿದ್ದನು. ಈ ರೂಢಿ ಇವನಿಗೆ ಈ ಕಡುಕಷ್ಟದ ಇಡಿ ಕಾಲದಲ್ಲೆಲ್ಲ ನಡೆದು ಬಂದಿದೆ. ಎಂದಿನಿಂದಲೂ ಇದಕ್ಕೆ ಆತನ ಅಂತರಂಗದ ಉತ್ತರವೆಂದರೆ ಒಂದೇ ಒಂದು. ಅದೇನೆಂದರೆ—"ಅಲ್ಲ, ಹಾಗೇನೂ ಅಲ್ಲ. ಆತನ ವಿಷಯದಲ್ಲಿ ಹಾಗೆ ಎಳ್ಳಷ್ಟೂ ಸಂದೇಹವಿಲ್ಲ. ಆದರೆ ಆತನ ಪೂರವು ಈಗ ಬಲುಹೆಚ್ಚು. ಮರೆತಾಗಳೆಲ್ಲಾ ಜೀವನವೇ ಬೇಸರಾಗಿ ಬಿಡುತ್ತದೆ. ಹೀಗೆ ಏಸೋ ದಿನ ಕಳೆದ ಮೇಲೆ ಯಾವದೇ ಒಂದು ಹೊರಗಿನ ಅಥವಾ ಒಳಗಿನ ಕಾರಣದಿಂದ ಒಮ್ಮೆ ಮತ್ತೆ ನೆಸವಾಗಿ ಬಿಟ್ಟರೆ ಆಗ ಎಲ್ಲಾ ಬಯಲಾಗಿ ಒಂದೇನೋ ಹೊಸ ಹುರುಪು ಬಂದುಬಿಡುತ್ತದೆ. ಈಗ ಮರವಿನ ವಿಸ್ತಾರದಲ್ಲಿ ಕುಸಿದು ಕುಂದಿಹೋಗುತ್ತಿದ್ದೇನೆ. ನೆಸವು ಅಚಲವಾಗದೆ ನಾನು ತಾಳಲಾರೆನೆಂದು ಹೀಗೆ ಉಮ್ಮಳಿಸುವೆನೇ ಹೊರತು ಆತನಿಲ್ಲನೆಂದಾಗಲಿ ಆತನ ಬಗೆಗೆ ಹಿಂದೆ ಹೊಳೆದುದು ಅಲ್ಲವೆಂದಾಗಲಿ ನನ್ನ ಅಭಿಪ್ರಾಯವಿಲ್ಲ. ಈಗ ತಾಳಿಕೊಳ್ಳಲಾರದ ಸ್ಥಿತಿ ಬಂದಿದೆ. ಇದು ಹೇಗೆ ಪರಿಹಾರವಾದೀತೆಂಬುದೊಂದೇ ಒಳಬಳಗಿನ ಅನುಕ್ಷಣದ ಆಶೆ; ಇಷ್ಟೆ."

ಹೀಗೆ ನಮ್ಮ ನಾಯಕನೊಳಗೆ ಸಂವಾದ ನಡೆಯುತ್ತಿದ್ದುದು ಈ ಕಾಳರಾತ್ರಿಯ ಕಾಲದಲ್ಲೆಲ್ಲಾ ನಮಗೆ ಕೇಳಿಸುತ್ತಲಿದೆ. ಇಲ್ಲಿ ಒಂದು ಮಾತೇನೆಂದರೆ—ಸಾಧಕ ಜೀವನದ ಕಷ್ಟವು ಮೊದಲಿನಿಂದ ಕೊನೆಯವರೆಗೆ ಒಂದೇ ಬಗೆಯದಾಗಿರುವದೆಂದು ಸಾಮಾನ್ಯ ಕಲ್ಪನೆ. ಆದರೆ ಅದು ತಪ್ಪು. ಅದರಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳಿವೆ. ತೀರ ಮೊದಮೊದಲಿಗೆ ದಿಕ್ಕುಗೆಟ್ಟು ನೆಲೆಯಿಲ್ಲದೆ ತಳಮಳಿಸಿ ಅಳುವುದು. "ಸಲಿಗೆಯ ಸಲ್ಲಾಪ"ವೆಂಬ ಕವಿತೆ (ಲೇಖಕನದು) ಈ ಮೊದಲ ಕಾಲದ್ದು. ಆ ಮೇಲೆ ಅದರ ಫಲ ಸ್ವರೂಪವಾಗಿ ಭಗವತ್‌ಸತ್ತೆಯು

ಪ್ರಥಮಪರಿಚಯುವಾಗುವದು. ಆ ಮೇಲೆ ಜೀವವು ಮತ್ತೆ ಮುಂದಡಿ ಯಿಡಲಾರಂಭಿಸುವದು. ಆಗ ಮತ್ತೊಂದು ಬಗೆಯ ಅನುತಾಪಕ್ಕೆ ಮೊದಲಾಗುವದು. ಆಗ ತನ್ನ ಗುಣಗಳ ನ್ಯೂನತೆಯ ಮೂಲಕ ಪಶ್ಚಾತ್ತಾಪ ಹುಟ್ಟುವದು. "ಮಧುರಗೀತ"ದ ಮೂರನೇ ಮುದ್ದು ಇಂತಹ ಕಾಲದ ಕನಲಿಕೆಯು. ಆ ಮೇಲೆ ಆದರ ಫಲವಾಗಿ ಸತ್ಯ ಸಂಸ್ಪರ್ಶವೆಂಬ ಧನ್ಯಾವಸ್ಥೆಯು ಬರುವದು. ಇಲ್ಲಿಗೆ ಜೀವವು ದೇವ ದೇವನ ಪ್ರೇರಕತ್ವವನ್ನು ಒಪ್ಪಿಕೊಳ್ಳುವದು. ಪಾರಮಾರ್ಥಿಕತೆ (Spirituality)ಯೆಂಬುದು ಇದೇ. ಇಲ್ಲಿಗೇ ಎಷ್ಟೋ ಸಾಧಕ ಜೀವ ಗಳು ನಿಲ್ಲಬಯಸುವವು. ಕೆಲ ಜೀವಗಳಲ್ಲೇನೋ "ಕೇವಲ"ದ ಹಸಿವೆ ಇನ್ನೂ ಹೆಚ್ಚಿಗಿರುತ್ತದೆಯಷ್ಟೆ? ಅವು ಅಷ್ಟಕ್ಕೆ ನಿಲ್ಲದೆ ಮತ್ತೆ ಮುಂದಕ್ಕೆ ಹೆಜ್ಜೆಯನ್ನೊಗೆಯುವವು. ಆಗ ಮತ್ತೊಂದು ತೀರಾ ಹೆಚ್ಚಿನ ಸಂಕಟವು ಉದ್ಭವಿಸುವದು. ಇದೇ ಕಾಳರಾತ್ರಿಯೆಂಬುದು. ಇಲ್ಲಿ ತಾಳ್ಮೆಯ ಕೊರತೆಯೊಂದು ಅತಿಶಯವಾಗಿ ಇರುವದು. ಆದರೂ ಒಳಗೊಳಗೆ ತೀರ ದೂರದಲ್ಲೇ ಆಗಲೊಲ್ಲದೇಕೆ ಹಿಂದಿನ ಆ ಅಚ್ಯುತ್ತಿದಂಥ ಅನುಭವದ ಸಂಸ್ಕಾರವು ಜೀವಂತವಾಗಿ ಇರುತ್ತದೆ. "ದೇವತಾ ಪೃಥಿವಿ"ಯೆಂಬ ಕವಿತೆಯು ಇಂಥ ಕಾಲದ ಹಗರಣದ ಹಿರಿ ಕುರುಹು. "ಇಲ್ಲಂಬು ಮರುಗಲ್ಲ। ಅಲ್ಲಂಬು ಅಳುಕಲ್ಲ। ಇದ್ದಿಲ್ಲದಂಥ ಪರಿಹೊಲ್ಲ॥ ಮರೆತು ಮಲಗುವಳಲ್ಲ। ಅರಿತು ಆತುರಳಲ್ಲ। ನಿನಗಾಟ ನನಗೆ ಎದೆಗಿಚ್ಚ॥" ಎಂದು ಚಡಪಡಿಸುವುದರಲ್ಲಿ ಒಳಭರವಸವು ಎಲ್ಲೋ ಗಗನಾಂಗಣ ದೊಂದು ಮೂಲೆಯೊಳಗಿನ ತಾರಗೆಯಂತೆ ಹಾಗೇ ಮಿಣುಕುತ್ತಲಿರು ತ್ತದೆ. ಇದು ಮೂರನೆಯ ಪ್ರಕಾರದ ಆರ್ತತೆ. ಇಲ್ಲಿ ಒಟ್ಟಿಗೇನೆಂದರೆ ಪರ್ಯಾಯದಿಂದ (Indirectly) ಈಶಪ್ರೇರಕತ್ವವನ್ನು ಒಪ್ಪಿಕೊಂಡ ಜೀವವು ಈಗ ತೀರ ಪ್ರತ್ಯಕ್ಷವಾಗಿ (Directly) ಮತ್ತು ಅವಿಚ್ಛಿನ್ನ ವಾಗಿ ಅದನ್ನು ಅನುಭವಿಸಲೆಳಸುತ್ತಿರುತ್ತದೆ. ಈ ಅಮೃತ ವಿಷಗಳ ತಳಕುಮುಳಕಿನಲ್ಲಿ ಸಾಗುತ್ತಲಿರುವ ಸಾಧಕ ಜೀವನದ ಎಷ್ಟೋ ಮಾತು ಗಳೊಳಗಿನ ಪರಸ್ಪರ ಸೂಕ್ಷ್ಮವ್ಯತ್ಯಾಸಗಳನ್ನು ಕಂಡು ಹಿಡಿಯುವುದು ಬಹಳೇ ಕಷ್ಟಕರವಾಗಿದೆ; ಅಷ್ಟು ಜಟಿಲವಾಗಿದೆ ಅದು! ಶ್ರೀಮಾನ್

ರಾನಡೆಯವರಂಥ ಘನವಿದ್ವಾಂಸರಾದ ಅನುಭಾವಿಗಳು ಬರೆದ "ಮಹಾರಾಷ್ಟ್ರದೊಳಗಿನ ಅನುಭಾವವಿದ್ಯೆ" (Mysticism in Maharashtra) ಎಂಬ ಗ್ರಂಥದಲ್ಲಿ ಕೂಡ ಸಂತಶಿಖಾಮಣಿಗಳ ಅಭಂಗವಚನಗಳಲ್ಲಿಯ ಸಂಕಷ್ಟಸಂತಾಪಗಳ ಉದ್ಗಾರಗಳನ್ನೆಲ್ಲ ಒಂದೇ ಒಂದು ವಿಭಾಗದಲ್ಲಿ ಸೇರಿಸಿ 'ಕಾಳರಾತ್ರಿ' (Dark Night) ಎಂದು ಕರೆಯಲಾಗಿದೆ. ಅವುಗಳ ಸೂಕ್ಷ್ಮವ್ಯತ್ಯಾಸಗಳ ಕಡೆಗೆ ಆದರಲ್ಲಿ ವಾಚಕರ ಲಕ್ಷ್ಯವನ್ನೆಳೆದಿಲ್ಲ. ಅಂದರೆ ಲಕ್ಷ್ಯದ ಕೈಯೊಳಗಿಂದ ಕೊಸರಿಕೊಂಡು ಗಲಿಬಿಲಿ ಮಾಡಿಬಿಡುವಷ್ಟು ಅವು ಸೂಕ್ಷ್ಮವಾಗಿರುತ್ತವೆಯೆಂಬುದಿಷ್ಟೇ ಇಲ್ಲಿ ನನ್ನ ಅಭಿಪ್ರಾಯ.

ಈ ಸಂಧಿಸ್ಥಲದೊಳಗಿನ ಅವನ ಶ್ರದ್ಧೆಯ ಬೌದ್ಧಿಕ ಸ್ವರೂಪವನ್ನಿಷ್ಟು ನೋಡಿಬಿಡೋಣ. ಈ ಕಾಳರಾತ್ರಿಯ ಕಾಲದಲ್ಲೆಲ್ಲಾ ಆತನು ಈ ವಿಷಯದಲ್ಲಿ ಒಂದೇ ಒಂದು ಮಾತನ್ನು ಹೇಳುತ್ತಿದ್ದಾನೆ. ಅದೇನೆಂದರೆ—

"ವಿಶ್ವವೆಂಬುವಂತೂ ಇದ್ದುದಕ್ಕೆ ನಮಗೆ ಅನ್ಯಸಾಕ್ಷಿಗಳ ಅಗತ್ಯವಿಲ್ಲ. ಈಗ ಒಂದೇ ಪ್ರಶ್ನೆ—ಅದು ಅಂಧಚಕ್ರವೋ, ಅಥವಾ ಅರಿತರಿತು ಸಾಗಿದ ಚಲನವಲನವೊ? ಇಷ್ಟೆ. ಅಂಧವೆಂದೆವಾದರೆ ಅದೇ ನಾಸ್ತಿಕತೆ, ಅರಿತದ್ದೆಂದೆವಾದರೆ ಅದೇ ಆಸ್ತಿಕತೆ. ಆಸ್ತಿಕ್ಯ ನಾಸ್ತಿಕ್ಯಗಳಲ್ಲಿ ಬಹಳ ಜಟಿಲತೆಯೇನೂ ನನಗೆ ಕಾಣುವದಿಲ್ಲ. ಮಹಾವಿಶ್ವದ ಸ್ಪಂದನಸಾಮ್ರಾಜ್ಯದ ವಿಷಯಕ್ಕಿರುವ ನಮ್ಮ ಕಲ್ಪನೆಯು ಇವೇ ಎರಡು ಪ್ರಕಾರಗಳಲ್ಲಿ ಒಂದಿಲ್ಲೊಂದರಲ್ಲಿ ಸೇರುವದು. ವಿಶ್ವದ ವೈಷಮ್ಯಗಳ (Divorsities) ದಾಳಿಯಲ್ಲಿ ಜೀವವು ಕಕ್ಕಾವಿಕ್ಕಿಯಾಗಿ ತಾಪಾಂಧಸ್ಥಿತಿಗೆ ಬಂದರೆ ಆಗ ಅದಕ್ಕೆ ವಿಶ್ವಸ್ಪಂದನವು ಅಂಧ ಕಂಪನವಾಗಿ ತೋರುವದು. ಆದರೆ ಅದೇ–ವಿಶ್ವದ ಪ್ರಶಾಂತತರಮಣೀಯ ಸ್ಥಿತಿಯ ಅಮೃತಧಾರೆಯು ಜೀವ ಜಿಹ್ವೆಯ ಮೇಲೆ ಸುರಿಯ ಹತ್ತಿದರೆ ಬುದ್ಧಿಯು ಆಗಿನ ಸಮತೋಲತೆಯ ಮೂಲಕ ಮಹಾ ಸ್ಪಂದನವು ಸಜ್ಞತೆಯಿಂದ ತುಂಬಿದುದಾಗಿ ತೋರುತ್ತದೆ. ಇವೆರಡಕ್ಕೂ ನಮ್ಮ ಸ್ಥಿತಿಯ ಏಕದೇಶೀಯತೆ ಹಾಗೂ ಸಮ

ತೊೀಲತೆ ಇವೇ ಕಾರಣವಾಗಿವೆ. ‘ ಸಮನ್ವಯದ ಸೂತ್ರವನ್ನು ಒಮ್ಮೆ ಕಂಡು ತಣಿದ ನಾನು ಅಂಧಚಕ್ರವೆಂದು ಹೇಗೆ ಹೇಳೇನು ? ಆದರೆ ಇನ್ನೂ ಇನ್ನೂ ಹೆಚ್ಚು ಹೆಚ್ಚು ಅದರ ಸಾಮೀಪ್ಯವನ್ನು ಬಯಸುತ್ತಿರುವೆನೇ ಹೊರತು ಅಲ್ಲ ಇಲ್ಲಗಳ ಬಲೆಯು ನನ್ನನ್ನು ಇನ್ನು ಎಂದಿಗೂ ಕಟ್ಟಿ ಹಾಕಲಾರದು. ”

ನಮ್ಮ ನಾಯಕನ ಈ ಅಂತರಾಳದ ಅಮರಕಲ್ಪನೆಗೆ ಅರವಿಂದರ ಈ ಮುಂದಿನ ದಿವ್ಯವಾಣಿಯು ಅಮೃತಸೇಚನದಂತಿಲ್ಲವೇ ?—

“ ನಮ್ಮ ಇರುವಿಕೆಯ ಪರಮ ಮತ್ತು ಪರಾತ್ಪರ ಸತ್ಯವು ಆ ಬ್ರಹ್ಮ, ಪರಮಾತ್ಮ, ಪುರುಷೋತ್ತಮ. ಜಗತ್ತೆಂದು ನಮ್ಮ ಅನುಭವಕ್ಕೆ ಬರುವದೆಲ್ಲವೂ ಆ ಬ್ರಹ್ಮವೆಂಬ ಸದ್ವಸ್ತುವಿನ ಚಿತ್‌ಶಕ್ತಿಯ ಆವಿರ್ಭಾವವು. ಈ ವಿಶ್ವಪ್ರಕೃತಿಯು ಪ್ರಾಣರಹಿತವಾದ, ಜಡವಾದ, ಚೈತನ್ಯವಿಲ್ಲದ ಯಂತ್ರವಲ್ಲ; ಅದರ ಪ್ರತಿ ಚಲನವಲನದಲ್ಲಿ ಬ್ರಹ್ಮ ಚೈತನ್ಯವು ತುಂಬಿರುವದು. ಯಾಂತ್ರಿಕವಾಗಿ ತೋರುವ ಸರ್ಗವಿಧಿಯೆಲ್ಲವು ಬರಿ ಹೊರದೋರಿಕೆ ಮಾತ್ರ; ನಿಜದಲ್ಲಿ, ಅದೆಲ್ಲವು ಬ್ರಹ್ಮವೆ ತನ್ನ ಸತ್ ಸ್ವರೂಪವನ್ನು ಪ್ರಕೃತಿಯ ರೂಪರೂಪದಲ್ಲಿ ಆವಿರ್ಭವಿಸುವದೂ ಸೃಜಿಸುವದೂ ಆಗಿದೆ.

---

## ೫

ಹಿಂದೆ ಏಳು ವರುಷಗಳಾಚೆ ಓದಿದ ಒಂದು ಪುಸ್ತಕದೊಳಗಿನ ಕೆಲವೊಂದು ಮಾತುಗಳು ನಮ್ಮ ನಾಯಕನ ಸ್ಮೃತಿಪಥದ ಮೇಲೆ ಮೆಲ್ಲನೆ ಮೈದೋರಿದವು. ಆಗ ಅವನಿಗೆ ಹೀಗೆ ಅನಿಸಹತ್ತಿತು: "ಅಧ್ಯಾತ್ಮ ರಾಜ್ಯದೊಳಗಿನ 'ಪುನರಧೋಗಮನ' ಅಥವಾ 'ಆತ್ಮಿಕ ಕಾಳರಾತ್ರಿ' ಎಂಬ ಅನಿವಾರ್ಯ ಅವಸ್ಥೆಯನ್ನು ಕುರಿತು ಅರವಿಂದರ ಹಾಗೂ ಅಂಡರ್‌ಹಿಲ್ಲರ ಪುಸ್ತಕಗಳಲ್ಲಿ ಹೇಳಿದ ಹಾಗೆಯೇ ಆ ಪುಸ್ತಕ ದೊಳಗೂ ಉಲ್ಲೇಖವಿದ್ದಂತೆ ನೆನಪಿಗೆ ಬರುತ್ತಿದೆಯಲ್ಲಾ! ಇದೀಗ ಪುನಃ ಮತ್ತೊಮ್ಮೆ ಓದಿ ನೋಡೋಣ." ಹೀಗೆಂದು ನಿರ್ಧರಿಸಿಕೊಂಡು ಹಳೆಯ ಗಂಟುಗದಡೆಗಳನ್ನೆಲ್ಲ ಚಾಳಿಸಿ ಅದನ್ನು ಹುಡುಕಾಡಿಕೊಂಡನು. ಅದು, ವಂಗದೇಶದಲ್ಲಿ ಶ್ರೀ. ರಾಮಕೃಷ್ಣರ ಕಾಲದಲ್ಲಿ ಬ್ರಹ್ಮಸಮಾಜದ ವ್ಯಾಸಪೀಠವನ್ನಲಂಕರಿಸಿದ್ದ ಒಬ್ಬ ಸಿದ್ಧವ್ಯಕ್ತಿಯಾದ ಶ್ರೀ. ವಿಜಯ ಕೃಷ್ಣ ಗೋಸ್ವಾಮಿಗಳ ಜೀವನ ಚರಿತ್ರೆ. ಇವರೂ ತಮ್ಮ ಆಧ್ಯಾತ್ಮಿಕ ಜೀವನದ ಪೂರ್ವಾರ್ಧದ (First mystic life) ಆತ್ಮಕಥೆಯನ್ನು 'ಮಾಯಾವತಿಯ ಉಪಾಖ್ಯಾನ'ವೆಂಬ ಹೆಸರಿನ ರೂಪಕ ಸ್ವರೂಪದಿಂದ ಬರೆದವರು. ಅದರಲ್ಲಿ ಅವರು ಬ್ರಹ್ಮಸಮಾಜದ ವ್ಯಾಸಪೀಠದಿಂದ ಎದ್ದೋಡಿ ಹೋಗಿ, ಸಾವಿರಾರು ಸಂಪ್ರದಾಯಗಳಲ್ಲಿ ಸೇರಿ ನಿರಾಶೆ ಹೊಂದಿ, ಕೊನೆಗೆ ಗಯಾದ ಬಳಿಯ ಗುಡ್ಡಗಾಡಿನ ಪಾಲಾಗಿ, ಅಲ್ಲಿ

ಆರ್ತ್ತ ಕರೆಪು, ದಿಕ್ಕುಗಾಣದೆ ಕಳವಳಿಸಿ ಕಾತರಿಸಿ ಕಂಗೆಟ್ಟು ಮೈಮರೆತು ಬಿದ್ದುಕೊಂಡಿರುವಾಗ ಒಬ್ಬ ಲೋಕೋತ್ತರ ತೇಜಸ್ವಿನ ಮೂರ್ತಿಯು ಇವರನ್ನು ತೊಡೆಯ ಮೇಲೆ ಮಲಗಿಸಿಕೊಂಡು ಮೈದಡವುತ್ತಿದ್ದ ಹಾಗೆಯೇ ಒಂದು ಅನಿರ್ವಚನೀಯವಾದ ಶಾಂತಿಯು ಜೀವದ ಅಂತರಾಳ ದಲ್ಲೆಲ್ಲ ಹರಡಿಕೊಂಡಿತು. * ಮುಂದೆ ಕೆಲಹೊತ್ತಿನ ನಂತರ, ಮೈಮೇಲೆ ಎಚ್ಚರು ಬಂದಾಗ ಆ ಮಹಾಪುರುಷನನ್ನು ಕಂಡು ತಾಯಿಯ ದುಗ್ಧಾವಯವಗಳನ್ನರಸುವ ಶಿಶುವಿನಂತೆ ಹಾತೊರೆದು ಆತನ ಪಾದಪದ್ಮಗಳನ್ನಪ್ಪಿಕೊಂಡು ತನ್ನ ಹಣೆಯಿಂದ ಆನಂದಾಮೃತಪಾನವನ್ನು ಮಾಡಿ ಮೈ ಪುಳಕವೇರಿ, ಕಣ್ಣು ಕಾವರವೇರಿ ಹರ್ಷಾತಿರೇಕದಿಂದಿದ್ದ ವೇಳೆಯಲ್ಲಿ ಆ ಮಹಾವ್ಯಕ್ತಿ ಅಂತರ್ಧಾನವಾಗಿ ಹೋಗಿಬಿಟ್ಟಿದ್ದಿತು. ಈ ಪರಿಯ ವರ್ಣನೆಯನ್ನು ಗೋಸ್ವಾಮಿ ಮಹಾನುಭಾವರು ಸ್ವತಃ ತಮ್ಮ ಆತ್ಮ ಕಥೆಯಲ್ಲಿ ತಾವೇ ತಮ್ಮ ಬಾಯಿಯಿಂದ ಹೇಳಿದುದನ್ನು ನಮ್ಮ ನಾಯಕನು ಹಿಂದೆಯೇ ಓದಿರುವನು. ಇಂಥ ಅವಸ್ಥೆ ತೆರೆದ ಮೇಲೆ ಮುಂದೊಮ್ಮೆ ಅವರ ಜೀವನದಲ್ಲಿ ಪುನಃ ಜ್ವಾಲಾಮುಖಿಯು ಭುಗಿಲೆಂದು ಉದ್ಭವಿಸಿದ ಕಥೆಯಿಂದು ನಮ್ಮ ಜ್ಞಾನಭಿಕ್ಷುವಿನ ನೆನಪಿಗೆ ಬಂದು ಇದೀಗ ಅಪರಿಮಿತ ಕುತೂಹಲದಿಂದ ಅದರ ಪುನರ್ನಿರೀಕ್ಷಣೆವನ್ನು ಮಾಡಲೆಳಸಿದನು. ಹಿಂದೆ ಎಂದೋ ಅದನ್ನು ಓದಿದ್ದನಾದರೂ

---

* ವಿಜಯಕೃಷ್ಣ ಗೋಸ್ವಾಮಿಗಳಿಗೆ ಆ ಲೋಕೋತ್ತರ ವ್ಯಕ್ತಿಯ ಹಸ್ತಸ್ಪರ್ಶದಿಂದ ಲಭಿಸಿದ್ದು ‘ಬ್ರಹ್ಮಸಂಸ್ಪರ್ಶ’ವೆಂಬ ಅವಸ್ಥೆ. ಆದರೆ ಬ್ರಹ್ಮಸಮಾಜದ ವ್ಯಾಸಪೀಠವನ್ನೇರುವುದಕ್ಕೆ ಮೊದಲೇ ‘ಪ್ರಥಮ ಪರಿಚಯ’ವೆಂಬ ಅವಸ್ಥೆಯು ಬಂದು ಹೋಗಿದ್ದಿತು. ಆ ಮೇಲೆ ತಮ್ಮಲ್ಲಿ ಇನ್ನೂ ಪಾಪಬುದ್ಧಿಯು ಬಡುಕಿಕೊಂಡಿದೆಯೆಂದು ಗೊತ್ತಾಗಲು ಅವರು ಕಾಡುಪಾಲಾದರು. ಅಲ್ಲಿಂದ ಮುಂದೆ ಇದೆಲ್ಲಾ ಲೋಕೋತ್ತರ ಘಟನೆ! ಇಲ್ಲಿ ನಾನು ಹೇಳಿರುವ ಅನುಭಾವದ ಮೆಟ್ಟಲುಗಳ ನಾಮಕರಣವು ಅಂಡರ್ ಹಿಲ್ಲರ ಪುಸ್ತಕದೊಳಗಿನ ಈ ಮುಂದಿನ ಶಬ್ದಗಳಿಗೆ ಸಮಾನವಾಗಿದೆ—

(೧) ಪ್ರಥಮ ಪರಿಚಯ ( ಅವೇಕನಿಂಗ್ ಆಫ್ ದಿ ಸೆಲ್ಫ್

(೨) ಬ್ರಹ್ಮಸಂಸ್ಪರ್ಶ ( ಇಲ್ಲ್ಯುಮಿನೇಶನ್ ಆಫ ದಿ ಸೆಲ್ಫ್ )

(೩) ಮಹಾಸಾಕ್ಷಾತ್ಕಾರ ( ಯೂನಿಟಿವ್ ಲೈಫ್ )

ಆಗ ಅವನಿಗೆ ಈ ಮಧ್ಯರಂಗದ ಕಲ್ಪನೆಯೇ ಇದ್ದಿರಲಿಲ್ಲವಾದುದರಿಂದ ಆಗ ಅದರ ಮಹತ್ವವು ಎಳ್ಳಷ್ಟೂ ತಿಳಿದಿದ್ದಿಲ್ಲ.

ಇದೀಗಿನ ವಿಷಯವು ಆ ಮಹಾನುಭಾವರ ಶಿಷ್ಯರೊಬ್ಬರು ಬರೆದ ಇವರ ಜೀವನಚರಿತ್ರದಲ್ಲಿಯದು. ಗೋಸ್ವಾಮಿ ಮಹಾಶಯರ ಸ್ವತಃದ ವಾಕ್ಯಗಳನ್ನೇ ಆಧಾರವಾಗಿ ಕೊಟ್ಟು ಇದನ್ನು ಬರೆದಿದ್ದಾಗಿದೆ. ಈ ಪುಸ್ತಕದಲ್ಲಿ ಹೇಳಿದ್ದುದೇನೆಂದರೆ—

"ಗೋಸ್ವಾಮಿ ಮಹಾಶಯರಿಗೆ ಮಹಾದೀಕ್ಷೆಯನ್ನು ಕೊಟ್ಟ ಅಲೌಕಿಕ ಯತಿಯು ಮುಂದೆ ಅವಶ್ಯಕತೆ ಕಂಡಾಗಳೆಲ್ಲಾ ಪುನಃ ಪುನಃ ಗೋಚರಿಸಿ ಮಾರ್ಗಪ್ರದರ್ಶನವನ್ನು ಮಾಡಿಕೊಡುತ್ತಿದ್ದರು. ಅವರು ಆಗ ಗೋಸ್ವಾಮಿಗಳಿಗೆ ಚಿತ್ತವೃತ್ತಿನಿರೋಧದ ಸಾಧನೆಗಳನ್ನು ಮಾಡತಿಳಿಸಿದ್ದರು. ಅದರಂತೆ ಇವರು ನಡೆಯಿಸಿದ್ದರು. ಆದರೆ ಬರಬರುತ್ತ ಜೀವನವು ಅತ್ಯಂತ ಶುಷ್ಕದೆಶೆಗೆ ಬಂದು ಅಂತರಂಗವು ಪುನಃ ಅಗ್ನಿಜ್ವಾಲೆಗಳ ಆಗರವಾಗಿಬಿಟ್ಟಿತು. ಆಗ ಅವರು ತಿರುಗಿ ಗೋಳಾಡಹತ್ತಿದರು. ಮಾನಸಸರೋವರ ವಾಸಿಗಳಾದ ಅಂಥ ಆ ಶಾಂತಿದಾತರಾದ ಯತಿವರರು ಹೇಳಿಕೊಟ್ಟ ಮಾತಿನ ಮೇಲೆ ಈಗ ಅವಿಶ್ವಾಸವುಂಟಾಗಬಿಟ್ಟಿತು. ಸಾಧನೆಯನ್ನು ಮಾಡುವುದಕ್ಕೆ ಮನಸ್ಸು ಎಳ್ಳಷ್ಟೂ ಒಪ್ಪದಂತಾಯಿತು. ಹೊರಗೆ ಇನ್ನಾವುದರಲ್ಲಿಯೂ ಲಬ್ಧವಿಲ್ಲ, ಒಳಗೆ ಎಳ್ಳಷ್ಟೂ ಶಾಂತಿಯಿಲ್ಲ. ಇಂಥ ಅವಸ್ಥೆಗೆ ಆಂತರಿಕ ಪಂಚಾಗ್ನಿಯೆಂದು ಹೆಸರು. ಅಥವಾ ನಾಮಾಗ್ನಿಯೆಂತಲೂ ಅನ್ನಬಹುದು. ಈಶನ ನಿಜನಾಮವು ಅಂತರಂಗದಲ್ಲಿ ಅನುಪ್ರಾಣಿತವಾದ ಮೇಲೆ ಬಹು ಪೂರ್ವಜನ್ಮದ ಪಾಪರಾಶಿಗೆ ಬೆಂಕಿ ಹತ್ತುವದರಿಂದ ಈ ಘೋರದೆಶೆಯು ಪ್ರಾಪ್ತವಾಗುತ್ತದೆ. ಆದರೆ ಸ್ವತಃ ಸಾಧಕರಿಗೆ ಆಗಿನ ಕಾಲದಲ್ಲಿ ಅದೇನೂ ತಿಳಿಯದು. ಆದುದರಿಂದ ಅದರ ಉಗ್ರತೆಯು ಇನ್ನೂ ಎಷ್ಟೋ ಪಟ್ಟು ಹೆಚ್ಚಾಗಿಯೇ ಅನುಭವಕ್ಕೆ ಬರುವದು. ಇಂಥ ಕಾಲದಲ್ಲಿ ಸಾಧಕರು ಪುನಃ ಆತ್ಮಹತ್ಯಕ್ಕೆ ಪ್ರವೃತ್ತರಾದ ಉದಾಹರಣೆಗಳು ವಿಪುಲವಾಗಿವೆ.

"ಗೋಸ್ವಾಮಿಗಳ ಜೀವನವು ಹಗಲಿರುಳೆನ್ನದೆ ಅಗ್ನಿಹೋತ್ರವಾಗಿ ಉರಿಯುಹತ್ತಿತು. ಮತ್ತೆ ಎರಡುಸಾರೆ ಆತ್ಮಹತ್ಯಕ್ಕೆ ಎಳಸಿದರು. ಅಂಥಕಾಲದಲ್ಲೆಲ್ಲ ಆ ಅಲೌಕಿಕ ಸಾಮರ್ಥ್ಯದ ಯತಿವರರು ದರ್ಶನ ಕೊಟ್ಟು 'ಗಾಬರಿಯಾಗಬೇಡ, ಹಾಗೇ ಸಾಧನೆ ಮಾಡು' ಎಂದು ಹೇಳುತ್ತಿದ್ದರಾದರೂ ಆ ಮಾತಿನಮೇಲೆ ಇವರಿಗೆ ಎಳ್ಳಷ್ಟು ಶ್ರದ್ಧೆ ಹುಟ್ಟುತ್ತಿರಲಿಲ್ಲ. ಹೀಗಾಗಿ ಕೊನೆಗೊಮ್ಮೆ ಯತಿವರನು ಹೀಗೆಂದನು— 'ಎಲಾ ಇಂಥದೊಂದು ಪುಸ್ತಕ ಮಾರುವ ಅಂಗಡಿಯಲ್ಲಿ ಹಠಯೋಗ ಪ್ರದೀಪಿಕೆ ಮತ್ತು ವಿಚಾರಸಾಗರ ಎಂಬ ಎರಡು ಗ್ರಂಥಗಳನ್ನು ಕೂಡಿಸಿ ಬೈಂಡುಮಾಡಿದ ಒಂದು ಪ್ರತಿಯು ಮಾರಲಿಕ್ಕೆ ಸಿಗುತ್ತದೆ. ಅದನ್ನು ತಂದು ಓದಿ ಆ ಬಳಿಕ ನನ್ನೊಡನೆ ಮಾತಾಡುವಿಯಂತೆ; ಹೋಗು.'— ಹೀಗೆಂದು ಹೇಳಿದ ತಕ್ಷಣವೇ ಇವರು ಆ ಅಂಗಡಿಗೆ ಹೋಗಿ ಆ ಪುಸ್ತಕವನ್ನು ಕೊಂಡುತಂದು ಓದಹತ್ತಿದರು. ಅದರಲ್ಲಿ ತಮ್ಮ ಈಗಿನ ಅವಸ್ಥೆಯನ್ನು ಕುರಿತು ಹೀಗೆ ಹೇಳಿದುದು ಕಂಡಿತು: **'ಇದು ಪತನವಲ್ಲ, ಬಂದೇ ತೀರುವ ಒಂದು ಅವಸ್ಥೆ. ಇದೇ ನಿಜವಾದ ಯೋಗಾವಸ್ಥೆ'**

"ಆಗ ಗೋಸ್ವಾಮಿ ಮಹಾಶಯರಿಗೆ ಹೊಟ್ಟೆ ಹಿಡಿಸದಷ್ಟು ಹಿಗ್ಗಾಗಿ ಆ ಯತಿವರರಿಗೆ ಪೊಡಮಟ್ಟು ಹೀಗೆಂದರು— 'ನೀವು ಮೊದಲೇ ನನಗೆ ಈ ವಿಷಯವನ್ನು ಹೇಳಿಕೊಡಲಿಲ್ಲವೇಕೆ? ಅಥವಾ ಈ ಪುಸ್ತಕವನ್ನೇ ನನಗೆ ಮೊದಲು ಸೂಚಿಸಲಿಲ್ಲವೇಕೆ?' ಹೀಗೆಂದ ಮಾತಿಗೆ ಆ ಮಹಾಪುರುಷನು ಉತ್ತರಕೊಟ್ಟದ್ದು ಹೇಗೆಂದರೆ— 'ಎಲಾ, ನೀವೆಲ್ಲಾ ತರ್ಕಪ್ರಧಾನ ಸಂದಿಗ್ಧ ಜೀವಗಳು. ನಿನಗೆ ಮೊದಲೇ ಇಂಥ ಅವಸ್ಥೆ ಬರುವುದಾಗಿ ಹೇಳಿಕೊಟ್ಟಿದ್ದರೆ ಅಥವಾ ಈ ಪುಸ್ತಕದ ಹೆಸರನ್ನು ಸೂಚಿಸಿದ್ದರೆ ಅದರ ಪರಿಣಾಮವೇನಾಗುತ್ತಿದ್ದಿತೆಂದರೆ— 'ಹೀಗಾಗುವದೆಂಬ ಕಲ್ಪನೆ ತಲೆಯಲ್ಲಿ ಸೇರಿಕೊಂಡದ್ದರಿಂದ ಒಳಗೊಳಗೇ ಒಂದು ಬಗೆಯ ಅವ್ಯಕ್ತ ಪ್ರಕಾರದ ಚಿಂತೆಹತ್ತಿ ಹೀಗಾಯಿತೇ ಹೊರತು ಇದೇನೂ ಅನಿವಾರ್ಯವಾಗಿ ಬಂದೇ ತೀರುವ ಅವಸ್ಥೆಯಲ್ಲ'

ಎಂದು ನೀನು ಭಾವಿಸಿಕೊಂಡು ಕೂಡುತ್ತಿದ್ದಿ. ನಿನ್ನದು ನಿನಗೇ ತಿಳಿಯು ಲೆಂದು ನಾನು ಬೇಕೆಂತಲೇ ಹಾಗೆ ಹೇಳಿಕೊಡಲಿಲ್ಲ' ಹೀಗೆಲ್ಲಾ ವಿವರಿಸಿದ ಬಳಿಕ ಇವರಿಗೆ ತುಂಬಾ ನಿಸ್ಸಂಶಯವಾಯಿತು.

"ಈ ವಿಷಯದಲ್ಲಿ ಗೋಸ್ವಾಮಿಗಳು ಸ್ವತಃ ತಾವೇ ಹೇಳಿದುದು ಹೇಗೆಂದರೆ— 'ಈ ಯಾತನೆ ತಾಳದೆ ನಾನು ಎರಡು ಸಾರೆ ಆತ್ಮಹತ್ಯ ಮಾಡಿಕೊಳ್ಳಲಿಕ್ಕೆ ಹೋಗಿದ್ದೆನು.' ಪರಮಹಂಸರೇ ರಕ್ಷಿಸಿದರು. (ಇಲ್ಲಿ ಪರಮಹಂಸರೆಂದರೆ ಆ ಯತಿವರರು.) ಅಗ್ನಿಯು ಸತತವಾಗಿ ಧಗಧಗಿಸುತ್ತಿತ್ತು. ಜನ್ಮಜನ್ಮಾಂತರದ ಪೂರ್ವ ಕರ್ಮದ ರಾಶಿಯೇನು ಚಿಕ್ಕದೇ? ಅಂತಹುದನ್ನೆಲ್ಲ ದಹಿಸಿ ಭಸ್ಮಮಾಡಲು ಅದೇನು ಸಣ್ಣಪುಟ್ಟ ಬೆಂಕಿಗೆ ನೀಗುವ ಮಾತೇ? ಬಹು ಪ್ರಗಾಢವಾದ ಅಗ್ನಿರಾಶಿ ಬೇಕು. ಈ ಯಾತನೆಯೇ ನಿಜವಾದ ಮುಕ್ತಿಗೆ ಮಾರ್ಗವು. ಇದು ಯಾರಿಗೆ ಉಂಟಾಗುವದೋ ಅವರು ಕೃತ್ರಿಮ ಧರ್ಮವನ್ನು ಲೆಕ್ಕಿಸಲಾರರು. ಹೇಗೆ ಅಂತರ್ಜ್ವಾಲೆ ನಂದೀತೆಂಬುದೊಂದಲ್ಲದೆ ಇನ್ನಾವುದರ ಪರವೆಯೂ ಆಗ ಉಳಿದಿರಲಾರದು.........ಪುರಾತನ ಋಷಿಗಳು ಹೇಳಿರುದೇನಂ ದರೆ— ಮೊದಲಿಗೆ ಬ್ರಹ್ಮಜ್ಞಾನವಾಗುವದು. ಸರ್ವ ಚರಾಚರದಲ್ಲಿ ಪ್ರತ್ಯಕ್ಷಾನುಭವವಾಗುವದು. ಬಳಿಕ ಎರಡನೆ ಅವಸ್ಥೆಯೆಂದರೆ ಯೋಗ. ಇದು ಹಠಯೋಗ ಮುಂತಾದ ಮಾರ್ಗದ್ದಲ್ಲ. ಆತ್ಮದಲ್ಲಿ ಪರಮಾತ್ಮನ ಪ್ರತ್ಯಕ್ಷ ಲಾಭವಾಗುವದು. ಯೋಗವೆಂದರೆ ಇಂಥ ಯೋಗ. ಮುಂದೆ ಮೂರನೆಯದು ಭಗವಲ್ಲೀಲಾನುಭವ. ಭಗವಂತನ ಅಪಾರ ಅನಿರ್ವಚ ನೀಯ ಅಘಟಿತ ಲೀಲಾವಾರಿಧಿಯ ದರ್ಶನವಾಗುವದು. ಪೂರ್ವಕಾಲ ದಲ್ಲಿ ಋಷಿಗಳೂ, ಕಲಿಯುಗದಲ್ಲಿ ಶಾಕ್ಯಸಿಂಹನೂ (ಬುದ್ಧದೇವ) ಈ ಲೀಲಾದರ್ಶನವನ್ನು ಪಡೆದುಕೊಂಡಿರುವರು. ಈ ಅವಸ್ಥೆಯಲ್ಲಿ ಭಗವಂತನ ನಿಜದರ್ಶನವಾಗುವದು. ಆ ರೂಪವೆಂದರೆ ಸತ್, ಚಿತ್, ಆನಂದಗಳ ಮಹಾಘನ. ಆ ರೂಪವು ಪಂಚಭೂತಾತ್ಮಕವಲ್ಲ. ರೂಪ ವೆಂಬ ಶಬ್ದವೇ ಅದಕ್ಕೆ ಸರಿಯಾಗಲಾರದು. ಆದರೆ ಬೇರೆ ಶಬ್ದವಿಲ್ಲದ್ದರಿಂದ 'ರೂಪ'ವೆಂದು ಹೇಳಬೇಕಾಗುವದು" ಇತ್ಯಾದಿ ಇತ್ಯಾದಿ—

ಆಗ ನಮ್ಮ ನಾಯಕನಿಗೆ ರಾಮಕೃಷ್ಣ ವಿವೇಕಾನಂದರ ಜೀವನ ದಲ್ಲಿಯೂ ಈ ಅವಸ್ಥೆ ಬಂದ ಹಾಗೆ ಅನಿಸಹತ್ತಿತು. ಅವರ ಚರಿತ್ರಗಳನ್ನು ತೆಗೆದು ಹುಡುಕಾಡಿ ನೋಡಲು ಅದು ನಿಜವೇ ಎಂದು ಗೊತ್ತಾಯಿತು. ಅದು ಹೇಗೆಂದರೆ—

ಸ್ವಯಂ ರಾಮಕೃಷ್ಣರ ಅಂತರಂಗ ಶಿಷ್ಯರಲ್ಲೊಬ್ಬರಾದ ಶ್ರೀ. ಶಾರದಾನಂದರು ಬರೆದ 'ಶ್ರೀ. ರಾಮಕೃಷ್ಣಲೀಲಾ ಪ್ರಸಂಗ'ವೆಂಬ ಪ್ರಕಾಂಡ ಗ್ರಂಥದ ಎರಡನೆಯ ಭಾಗದ (ಸಾಧಕಭಾವವೆಂಬುದರಲ್ಲಿ) ನೂರಾಹತ್ತನೇ ಪುಟದಲ್ಲಿ–ಪರಮಹಂಸರ ಆತ್ಮಹತ್ಯೋದ್ಯಮದ ಅನಂತ ರದ–ಸಾಕ್ಷಾತ್ಕಾರದ ಸ್ಥಿತಿಯನ್ನೆಲ್ಲಾ ಸ್ವಯಂ ರಾಮಕೃಷ್ಣರ ಮುಖ ದಿಂದ ಬಂದ ವಚನಗಳಿಂದಲೇ ವಿವರಿಸಿ ಮುಂದಿನ ಪುಟದಲ್ಲಿ ಹೀಗೆ ಹೇಳಲಾಗಿದೆ—

**ಪೂರ್ವೋಕ್ತ ದರ್ಶನವು ವಿರಮಿಸಿದ ಮೇಲೆ** ಶ್ರೀ. ಶ್ರೀ. ಜಗದಂಬೆಯ ಚಿನ್ಮಯೀ ಮೂರ್ತಿಯ ಅಬಾಧ ಅವಿರಾಮ ದರ್ಶನ ಲಾಭ ಕ್ಕಾಗಿ ಪರಮಹಂಸರ ಪ್ರಾಣದಲ್ಲಿ ಒಂದು ಅವಿಶ್ರಾಂತ ಆ ಕುಲಕ್ರಂದ ನದ ಮಹಾಪೂರವು ತುಂಬಿಬಂದಿತು. ಕ್ರಂದನಾದಿ ಬಾಹ್ಯಲಕ್ಷಣಗಳು ಸಕಲಸಮಯದಲ್ಲಿ ಪ್ರಕಾಶಿತವಾಗದಿದ್ದರೂ ಅದು ಅಂತರಂಗದಲ್ಲಿ ಸದಾ ಜಾಗೃತವಾಗಿ ಇರುತ್ತಿದ್ದಿತು. ಮತ್ತು ಒಮ್ಮೊಮ್ಮೆ ಅದು ಎಷ್ಟು ಉಲ್ಬಣಿಸುತ್ತಿದ್ದಿತೆಂದರೆ ಅದನ್ನು ಬಿಗಿದು ಹಿಡಿಯುವುದಕ್ಕೆ ಶಕ್ಯವಾಗದೆ ಅವರು ನೆಲಕ್ಕೆ ಬಿದ್ದು ಹೊರಳಾಡಿ ಅಳುತ್ತ ಅಳುತ್ತ 'ತಾಯೇ! ನನ್ನ ಮೇಲೆ ಕೃಪೆ ಮಾಡು!! ಕಾಣಿಸು ಕಾಣಿಸು!!!' ಎಂದು ಚೀರಾಡ ಹತ್ತಿದರೆ ಆ ಗದ್ದಲಕ್ಕೆ ನೆರೆಹೊರೆಯವರೆಲ್ಲ ಸುತ್ತು ಮುತ್ತು ನೆರೆದು ನಿಲ್ಲುತ್ತಿದ್ದರು! ಈ ಬಗೆಯ ಅಸ್ಥಿರತೆಯನ್ನು ನೋಡಿ ಜನರು ಏನು ಅಂದಾರು ಎಂಬುದರ ಕಡೆಗೆ ಅವರ ಲಕ್ಷ್ಯವು ಎಳ್ಳಷ್ಟೂ ಇರುತ್ತಿದ್ದಿಲ್ಲ. ಈ ವಿಷಯದಲ್ಲಿ ಅವರೇ ಹೇಳುತ್ತಿದ್ದುದು ಹೇಗೆಂದರೆ—'ನಾಲ್ಕೂ ನಿಟ್ಟಿನಲ್ಲಿ ಜನರು ನೆರೆದು ತಿಂತುಕೊಂಡಿದ್ದರೂ ನನಗೆ ಅವರೆಲ್ಲಾ ಚಿತ್ರ ದೊಳಗಿನ ಗೊಂಬೆಗಳಂತೆ ಅವಾಸ್ತವವಾಗಿ ತೋರುತ್ತಿದ್ದದ್ದರಿಂದ ನನಗೆ

ಎಳ್ಳಷ್ಟೂ ನಾಚಿಕೆಯಾಗಲಿ ಸಂಕೋಚವಾಗಲಿ ಉಂಟಾಗುತ್ತಿದ್ದಿಲ್ಲ. ಈ ಪ್ರಕಾರದ ಅಸಹ್ಯಯಾತನೆಯಿಂದ ಒಮ್ಮೊಮ್ಮೆ ಬಾಹ್ಯಸಂಜ್ಞಾ ಶೂನ್ಯನಾಗಿ ಬಿದ್ದುಕೊಂಡು ಬಿಡುತ್ತಿದ್ದೆನು. ಇಷ್ಟಾದ ಕೂಡಲೇ ಕಾಣುತ್ತಿದ್ದೆನು—ಮಹಾ ಮಾತೆಯ ವರಾಭಯಕರ ಚಿನ್ಮಯೀ ಮೂರ್ತಿ ಯನ್ನು! ಆ ಮೂರ್ತಿಯು ನಗುವುದು, ಮಾತನಾಡುವುದು, ಪರಿಪರಿ ಯಿಂದ ಸಂತಯಿಸುವುದು, ತಿಳಿಹೇಳುವುದು ಮುಂತಾದುದನ್ನೆಲ್ಲಾ ಕಾಣುತ್ತಿದ್ದೆನು!"

ಅರವಿಂದರ ಸಂಘದ ಅತಿ ಮುಖ್ಯರಲ್ಲೊಬ್ಬರಾದ ಮತಿಲಾಲ ರಾಯರೆಂಬವರು ಬರೆದ 'ಯುಗಾಚಾರ್ಯ ವಿವೇಕಾನಂದ' ಎಂಬ ಪುಸ್ತಕದಲ್ಲಿ—ರಾಮಕೃಷ್ಣರ ಅವತಾರ ಸಮಾಪ್ತಿಯ ಅನಂತರ ವಿವೇಕಾ ನಂದರು ಕೆಲವು ವರುಷಗಳವರೆಗೆ ಪರಿವ್ರಾಜಕ ತ್ರಿದಂಡೀ ಸನ್ಯಾಸಿಯಾಗಿ ಭರತವರ್ಷದ ತುಂಬ ಅಲೆದಾಡುತ್ತಿದ್ದಾಗ ಅವರ ಅಂತರಂಗದಲ್ಲಿ ಪರಮ ಹಂಸರ ಸಂಗತಿಯಿಂದ ತಾನು ಗತಿಗಾಣಲಿಲ್ಲೆಂದೆನಿಸಿ ಆಕ್ರೋಶ ಮಾಡು ತ್ತಿದ್ದ ಪ್ರಸಂಗವನ್ನು ಪೂರ್ವರಂಗದಲ್ಲಿಯೇ ನಾನು ಉಲ್ಲೇಖಿಸಿರುವೆ ನಷ್ಟೇ? ಅದೇ ಅವರ ಕಾಳರಾತ್ರಿಯ ಪರಮಶಿಖರವು. ಅಂಥ ಅತಿ ದಾರುಣ ಅವಸ್ಥೆಯು ಅವರಿಗೆ ಇಪ್ಪತ್ತೊಂದು ದಿನಗಳವರೆಗೆ ಒಂದೇ ಸವನೆ ಹಗಲಿರುಳೆನ್ನದೆ ಹಿಂಡಿ ಹಿಪ್ಪೆ ಮಾಡುತ್ತಿದ್ದಿತಂತೆ! ಈ ಪ್ರಸಂಗವನ್ನು ಕುರಿತು ಮೇಲೆ ಹೇಳಿದ ವಂಗೀಯ ಗ್ರಂಥದಲ್ಲಿ ಹೀಗೆ ವರ್ಣನೆಯಿದೆ—

"......ಪರಮಹಂಸರ ಹಸ್ತಸ್ಪರ್ಶದಿಂದ ಎಷ್ಟು ಜನ ಘೋರ ಪಾಪಿಗಳು ಉದ್ಧಾರವಾದರೆಂಬುದೂ, ಸಮಾಧಿಲಾಭವನ್ನು ಹೊಂದಿದ ರೆಂಬುದೂ ನರೇಂದ್ರನಿಗೇನು ಅಪರಿಚಿತ ವಿಷಯವೇ? ಸ್ವತಃ ತಾನೇ ತನ್ನೊಬ್ಬ ಕಕ್ಕನನ್ನು ಪರಮಹಂಸರ ಮರಣ ಸಮಯ ಸಮೀಪಿಸಿದಾಗ ಅವರ ಹತ್ತಿರ ಕರೆದುಕೊಂಡು ಹೋಗಿ 'ಈತನನ್ನು ಮುಟ್ಟಿರಿ, ಮುಕ್ತ ನಾಗಲಿ!' ಎಂದು ಬೇಡಿಕೊಳ್ಳಲು, ಅದಕ್ಕವರು—'ಎಲಾ, ನಾನು ನಡೆದಿದ್ದೇನೆ—ನನಗೆ ಯಾಕೆ ಆತಂಕಪಡಿಸುವಿ?' ಎಂದು ಹೇಳಿದರೂ

ಕೂಡ ನರೇಂದ್ರನು ಆ ಮಾತಿನ ಕಡೆಗೆ ಲಕ್ಷ್ಯಗೊಡದೆ ಇದ್ದುದಕ್ಕಾಗಿ, ದಯಾಮೂರ್ತಿಯಾದ ಪರಮಹಂಸರು ಕರುಣವಿಟ್ಟು ತಮ್ಮ ತುದಿ ಬೆರಳಿನಿಂದ ಮುಟ್ಟಿದೊಡನೆ ಆತನಿಗೆ ಸಮಾಧಿಲಾಭವಾಗಿದ್ದಿತು. ಅಂಥ ಆ ಪ್ರತ್ಯಕ್ಷ ಸಂಗತಿಯೂ ಕೂಡ ಇಂದು ನರೇಂದ್ರನಿಗೆ ಮರೆತು ಹೋಗಿದ್ದೀತೇ? **ಮಾರನು** ಯಾವಾಗ ಬರುವನೋ ಆವಾಗ ಈತನು ಅತಿ ದುರ್ಜಯ ವೇಷದಲ್ಲಿಯೇ ಬರುವನು! ನರೇಂದ್ರನು ಇಪ್ಪತ್ತೊಂದು ದಿನಗಳವರೆಗೆ ಇಂಥ ತುಮುಲಯುದ್ಧದಲ್ಲಿ ಶ್ರಮಬಟ್ಟು ಕೊನೆಗೂ ರಾಮಕೃಷ್ಣರನ್ನು ಧಿಕ್ಕರಿಸಿ ಪಾವಾರೀಬಾವಾನ ಹತ್ತಿರ ಯೋಗದೀಕ್ಷೆಯನ್ನು ಹೊಂದಬೇಕೆಂದು ನಿರ್ಧರಿಸಿಕೊಂಡು ಎದ್ದು ಹೊರಟನು!" ಇದರಮುಂದೆ ಏನಾಯಿತೆಂಬುದನ್ನಂತೂ ನೀವು ಪೂರ್ವರಂಗದಲ್ಲಿ ಓದಿಯೇ ಇರುವಿರಿ. ಜ್ಞಾನಭಿಕ್ಷುವಿಗೆ "ಕುತಸ್ತ್ವಾ ಕಶ್ಮಲಮಿದಂ ......" ಇತ್ಯಾದಿ ಗೀತಾಶ್ಲೋಕದ್ವಯವು ಸಂದೇಶವಾಗಿ ಬಂದಾಗ ಎಂಥಾ ಭೀಕರವಾದ ಆಂತರಿಕ ಸ್ಫುರಣಗರ್ಜನೆಯಾಯಿತೆಂದು ನಾನು ಇದೇ ಪುಸ್ತಕದ ಪ್ರಥಮಭಾಗದ ಕೊನೆಯಲ್ಲಿ ಹೇಳಿರುವೆನೋ ಅಂಥಾ ಅಥವಾ ಅದಕ್ಕಿಂತಲೂ ಮಹಾ ರೌದ್ರವಾದ ಘನಗರ್ಜನೆಯಿಂದ (ರಾಮಕೃಷ್ಣರೇ ಬಂದು ಅಂದಂತೆ) ನರೇಂದ್ರನಿಗೆ ಕಿವಿಹಿಂಡಿ ಹಾದೀ ತೋರಿಸಿದಂತಾಯಿತಂತೆ!!!

ಇಲ್ಲಿ ಮತಿಲಾಲರಾಯರು ಬಣ್ಣಿಸಿದ **ಮಾರನ** ಕಾಟವೇ ನಮ್ಮ **ಕಾಳರಾತ್ರಿ**. ಇದು ಪುರಾತನ ಮಹಾ ಅವತಾರಿಗಳಾರನ್ನೂ ಬಿಟ್ಟಿಲ್ಲ. ಬುದ್ಧದೇವನ ಕೊನೆಯ ಮಹಾಪ್ರಕಾಶವೂ ಅದಕ್ಕಿಂತ ಮೊದಲಿನ ಮಾರನ ಚೆಲ್ಲಾಟವೂ ಅತ್ಯಂತ ಪ್ರಸಿದ್ಧವಾದ ವಿಷಯಗಳೆಂಬುದು ಲೋಕಕ್ಕೇ ಗೊತ್ತಿದೆಯಷ್ಟೇ? ಆದರೆ ಇಲ್ಲಿ ವಾಚಕರಿಗೊಂದು ಸಂದೇಹಕ್ಕೆ ಆಸ್ಪದವಿದೆ. ಅದೇನೆಂದರೆ ಬುದ್ಧದೇವನ ಜೀವನದಲ್ಲಿ ಕಾಣುವ ಆ ಮಾರನ ಘೋರ ಪೀಡೆಗೆ ಕಾಳರಾತ್ರಿಯೆಂದು ಹೇಗೆ ಹೇಳುವುದು? ಕಾಳರಾತ್ರಿಯಾದರೋ ಎರಡು ಮಹಾ ಅವಸ್ಥೆಗಳ ನಟ್ಟನಡುವೆ ಬರುತ್ತದೆಯೆಂದು ಇಷ್ಟರವರೆಗಿನ ವಿವೇಚನೆಯಿಂದ

ಸಿದ್ಧವಾಗುತ್ತದೆ. ಆದರೆ ಶಾಕ್ಯಸಿಂಹನಿಗೆ ಅದೇ ಒಂದು ಮೊದಲನೆಯ ಮಹಾ ಅನುಭವ. ಅದಕ್ಕಿಂತ ಮುಂಚೆ ಬೇರೊಂದು ಮಹಾ ಅನುಭವವು ಬಾರದೆ ಇರುವಾಗ ಮಾರನಾಟವು ಮಧ್ಯರಂಗವೆಂತಾಗುವದು?

ಸರಿ. ಈ ಸಂದೇಹವು ಬಹಳೇ ಮಹತ್ವದ್ದು. ಆದರೆ ಇಲ್ಲಿ ನಾನು ಹೇಳುವುದೇನೆಂದರೆ— ಬುದ್ಧದೇವನ ಪೂರ್ವಜೀವನದ ವಿಷಯಕ್ಕೆ ನಮಗೆಲ್ಲಾ ಈಗ ತಿಳಿದಿರುವ ಮಾತು ಬಹಳ ಸ್ವಲ್ಪಮಾತ್ರ. ಆದರೆ ಆ ಮಹಾವತಾರಿಯ ಮುಖದಿಂದ ಹೊರಟ ಅಮರ ವಾಕ್ಯಗಳ ಮಹಾ ನಿಧಿಯಾದ ತ್ರಿಪಿಟಕದಲ್ಲಿ ಮಜ್ಝಿಮನಿಕಾಯದ 'ಅರಿಯ ಪ್ರಿಯೇಷಣಾ ಸುತ್ತ' ವೆಂಬ ಉಪಗ್ರಂಥದಲ್ಲಿ ತಾನು (ಸ್ವತಃ ಬುದ್ಧದೇವನು) ಆಲಾರ ಕಾಲಾಮ ಮತ್ತು ಉದ್ದಕರಾಮ ಪುತ್ತರೆಂಬ ಇಬ್ಬರು ಮಹಾ ಉದಾರ ಅನುಭವಿಗಳಲ್ಲಿ ಸಖ್ಯಭಾವದಿಂದ ಇದ್ದುಕೊಂಡು ಅವರವರ ಅನುಭವಗಳನ್ನು **ಸ್ವತಃ ಅನುಭವಿಸಿ,** (ಆದರೆ ಓದಿ ಕೇಳಿಯಲ್ಲ) 'ಇಷ್ಟಕ್ಕೇ ಆಯಿತೆನ್ನುವಿರೋ ಅಥವಾ ಇನ್ನೂ ಮುಂದೆ ಏನಾದರೂ ಇದೆಯನ್ನುವಿರೋ?' ಎಂದು ಕೇಳಿದಾಗ ಅವರು 'ಅಯ್ಯೋ, ಇನ್ನೂ ಅಪರಂಪಾರವಾಗಿ ಇದೆ! ನಮಗೇನೋ ಇಷ್ಟಕ್ಕೇ ತೃಪ್ತಿಯಾದುದ ರಿಂದ ನಾವು ಇಲ್ಲಿಗೇ ಸಾಕೆಂದು ನಿಂತುಕೊಂಡಿದ್ದೇವೆ' ಎಂದು ಪ್ರಾಂಜಲವಾದ ಉತ್ತರವನ್ನಿತ್ತರು, ಅದಕ್ಕೆ ಆತನು— 'ಹಾಗಾದರೆ ನಾನು ಇಷ್ಟಕ್ಕೇ ನಿಲ್ಲಲಾರೆನು! ಅದರ ತಳದಿಂದ ತುದಿಯವರೆಗೆಲ್ಲಾ ಶೋಧಿಸಿನೋಡಬೇಕೆಂದು ನನ್ನ ಅಂತರಂಗವು ಆಶೆಪಡುತ್ತಿದೆಯಾದುದ ರಿಂದ ಮಿತ್ರರೇ ನಾನಿನ್ನು ನಿಮ್ಮಲ್ಲಿಂದ ಹೊರಡಲೇಬೇಕು' ಎಂದು ಹೇಳಿ ಅಕ್ಕರತೆಯಿಂದ ಕಳುಹಿಸಿಕೊಂಡು ಮುಂದೆ ಪರಿಪರಿಯ ಕಷ್ಟ ಗಳನ್ನು ಭೋಗಿಸಿ ಮಹಾ ಅವಸ್ಥೆಗೆ ಬಂದು ಮುಟ್ಟಿದನು.

ಸ್ವತಃ ಆ ಮಹಾಪುರುಷನ ಮುಖದಿಂದಲೇ ನಾವು ಈ ಮಾತನ್ನು ಕೇಳಿದರೆ ಆಗ ಇನ್ನೆಲ್ಲಿಯ ಸಂದೇಹ? ಆಲಾರ ಕಾಲಾಮನಲ್ಲಿ ಪಡೆದದ್ದು **ಪ್ರಥಮ ಪರಿಚಯ**ವೆಂಬ ಅವಸ್ಥೆ ಮುಂದೆ ಉದ್ದಕರಾಮ **ಪುತ್ತ**ನಲ್ಲಿ

ಪಡೆದದ್ದು **ಮಹಾಸಂಸ್ಪರ್ಶ**.* ಆಮೇಲೆ **ಮಾರನಕಾಟವೆಂಬ ಕಾಳರಾತ್ರಿ**. ಕೊನೆಗೆ **ಮಹಾ ದಿವ್ಯಾವಸ್ಥೆ**. ಇದರಲ್ಲೇನು ಅಕ್ರಮವೆಂದು ನಿಮಗೆ ತೋರುವದು?

ಇನ್ನು ನಿಮಗೆ ಬಾಯ್ಬಲ್ಲಿನ ಹಳೇ ಒಡಂಬಡಿಕೆಯಲ್ಲಿ ಮತ್ತು ಹೊಸ ಒಡಂಬಡಿಕೆಯ ಕ್ರಿಸ್ತ ಚರಿತ್ರೆಯಲ್ಲಿ ಆ ಮೇಲೆ ಹಜರತ ಮಹಮ್ಮದ ಪೈಗಂಬರರ ಜೀವನದಲ್ಲಿ ಇಷ್ಟೊ ಅಲ್ಲದೆ ವೇದದಲ್ಲಿ ಕಾಳ ರಾತ್ರಿಯ ಅಸ್ತಿತ್ವವನ್ನು ತೋರಿಸಿಕೊಟ್ಟರೆ ನಿಮಗೆ ಸಮಾಧಾನವಾಗುವದಲ್ಲವೆ?

---

* ಬುದ್ಧದೇವನು ಆಲಾರ ಕಾಲಾಮನದಲ್ಲಿದ್ದಾಗ ಅನುಭವಿಸಿದ್ದು "ಮಹಾಶೂನ್ಯ" (Realm of nothingness), ಮತ್ತು ಉದ್ದಕ ರಾಮಪುತ್ತನಲ್ಲಿ ಅನುಭವಿಸಿದ್ದು "ಗೋಚರಾತೀತ–ಅಗೋಚರಾತೀತ" (Realm of neither Perception nor Non-perception) "ನಸತ್ತನ್ನಾಸದುಚ್ಯತೇ". ವಿವೇಕಾನಂದರು ರಾಮಕೃಷ್ಣರ ಹಸ್ತಸ್ಪರ್ಶದಿಂದ ಎರಡು ವಾರಗಳಲ್ಲಿ ಪಡೆದ ಅನುಭವವು ಕೇವಲ ಇದೇ ಪ್ರಕಾರದ್ದು. ಮೊದಲನೆಯ ರವಿವಾರ ಭೌತಿಕ ವಸ್ತು ಸಮೂಹದ ಮಹಾಶೂನ್ಯತ್ವ, ಎರಡನೆಯ ರವಿವಾರ ಅನಿರ್ವಚನೀಯ ಅನುಭವ.

೬

ನಮ್ಮ ನಾಯಕನಿಗೀಗ ಅನುಭಾವ ರಾಜ್ಯದ ಈ ಕಾಳರಾತ್ರಿಯೆಂಬುದು ಸಾರ್ವಕಾಲಿಕ ಹಾಗೂ ಸಾರ್ವದೇಶಿಕವಾಗಿದೆಯೆಂದೆನಿಸಿ ಆ ಮೇರೆಗೆ ಬೇರೆ ಬೇರೆ ದೇಶ ಕಾಲಗಳ ಮಹಾನುಭಾವರ ಜೀವನ ಚರಿತ್ರೆಗಳನ್ನೆಲ್ಲ ಈ ದೃಷ್ಟಿಯಿಂದ ಕೂಲಂಕಷವಾಗಿ ಪರಿಶೀಲಿಸಹತ್ತಿದನು. ಕ್ರಿಸ್ತದೇವನ ನಾಲ್ವತ್ತು ದಿನಗಳ ಉಪವಾಸವೂ ಆಗಿನಕಾಲದಲ್ಲಿ ಆತನಿಗುಂಟಾದ ಸೈತಾನನ ಕಾಟವೂ ಬಾಯ್ಬಲ್ಲಿನ ವಾಚಕರಿಗೆಲ್ಲಾ ತುಂಬಾ ಪರಿಚಿತ ವಿಷಯಗಳೇ ಸರಿ. ಆದರೆ ಅದು ಮಧ್ಯರಂಗವೇ ಹೌದೆಂದು ಸಿದ್ಧವಾದರೆ ನಮ್ಮ ಕೆಲಸವಾದಂತಾಗುವುದಲ್ಲವೇ? ಆ ಲೋಕೋತ್ತರ ಪುರುಷನು ತೀರ ಚಿಕ್ಕಂದಿನಲ್ಲೇ ಜೇರೂಸ್‌ಲೇಮಿನ ಯಾತ್ರಿಕರೆದುರಿಗೆ ಶಾಸ್ತ್ರಾರ್ಥವನ್ನು ವಿಶದಗೊಳಿಸುತ್ತಿದ್ದನೆಂದು ಹೇಳಲಾಗಿದೆಯಷ್ಟೆ? ಸತ್ಯದ ಅಸ್ತಿತ್ವವು ಪ್ರಮಾಣಿತವಾಗಿದ್ದುದಕ್ಕೆ ಅದೇ ಕುರುಹು. ಅದರ ಅನಂತರ ಮಹಾ ಅನುಭಾವಿಯಾದ ದೀಕ್ಷಕ ಜಾನ್‌ನ ಹಸ್ತಸ್ಪರ್ಶದಿಂದ ಆಕಾಶದ ಹಕ್ಕಿಯು ಆತನ ತಲೆಯಮೇಲೆ ಇಳಿಯಿತೆಂಬುದು ಪ್ರಗಾಢ ಸ್ಪರ್ಶವೆಂಬ ಮಹತ್ವದ ಅವಸ್ಥೆ. ಅದರ ಬಳಿಕ ಉಪವಾಸ ಮತ್ತು ಸೈತಾನನ ಮೋಹವಾಯಿತು. ಇದೇ ಆತನ ಆಧ್ಯಾತ್ಮರಾಜ್ಯದ ಕಾಳರಾತ್ರಿ. ಬಳಿಕ ಮಹಾ ದಿವ್ಯಾವಸ್ಥೆ. ಇದರ ಮೇಲಿಂದ ಕ್ರಿಸ್ತದೇವನಿಗಾದ

ಸೈತಾನನ ಕಾಟವೂ ಬುದ್ಧದೇವನಿಗಾದ ಮಾರನಕಾಟದಂತೆ ಮಧ್ಯ ರಂಗವೇ ಆಹುದೆಂಬುದರಲ್ಲೇನು ಸಂದೇಹ?

ಹಜರತ ಮುಹಮ್ಮದ ಪೈಗಂಬರರ ಜೀವನ ಚರಿತ್ರಕಾರರಲ್ಲೊಬ್ಬನು ಹೀಗೆ ಹೇಳುತ್ತಾನೆ, ಅದೇನೆಂದರೆ— "ಮುಹಮ್ಮದರ ದೈವೀ ಆದೇಶಪ್ರಾಪ್ತಿಯ ವಿಷಯದಲ್ಲಿ **ಎಲ್ಲಕ್ಕಿಂತ ಹೆಚ್ಚು ಪ್ರಾಚೀನ ಕಾಲದ ಲೇಖಕರು ಹೇಳುವುದೇನೆಂದರೆ—**

"........ ಹೀಗೆ ಹೀರಾಪರ್ವತದಲ್ಲಿ ಅವರು ಬಹುದಿನ ತಪಶ್ಚರ್ಯವನ್ನು ಮಾಡುತ್ತಿದ್ದಹಾಗೆ ಒಂದು ದಿನ ದೇವದೂತನೊಬ್ಬನು ಪ್ರಕಟವಾಗಿ ದೈವೀಸಂದೇಶವನ್ನು ಕೊಟ್ಟನು. ಕುರಾಣದಲ್ಲಿ ಅದು ಈಗ ತೊಂಬತ್ತಾರನೇ 'ಸೂರಾ' ಆಗಿದೆ. ಆದೇಶವನ್ನಿತ್ತು ದೂತನು ಅಂತರ್ಧಾನವಾಗಿಬಿಟ್ಟನು. ಈ ವಿಷಯದಲ್ಲಿ ಮುಹಮ್ಮದರು ಹೇಳುತ್ತಿದ್ದುದೇನಂದರೆ— **'ಆ ಮಾತು ಅಂತಃಕರಣದಲ್ಲಿ ಕೆಚ್ಚಿಬಿಟ್ಟಂತೆ ಅಚಲವಾಯಿತು'*** **ಆದರೆ ಅನಂತರ ಮುಹಮ್ಮದರು ಅನೇಕ ದಿನಗಳವರೆಗೆ ಯಾವ ದರ್ಶನಾದಿಗಳನ್ನು ಕಾಣದೆ ಇದ್ದರು.** ಕೆಲಕೆಲವರು ಒಂದು ವರುಷ ಹೀಗೆ ಕಳೆಯಿತೆಂದು ಹೇಳುವರು, ಹಲಕೆಲವರು ಇಡೀ ಎರಡು ವರುಷಗಳಲ್ಲಿ ಒಮ್ಮೆಯೂ ಪುನಃ ದರ್ಶನಾದಿಗಳು ಲಭಿಸಲಿಲ್ಲವೆಂದು ಹೇಳುವರು. ಆದರೆ ಅದೇನೇ ಇರಲಿ **ಮುಹಮ್ಮದರು ಬಹಳ ದಿವಸ ಹೀಗೆ ತಿರುಗಿ ದೇವದೂತನ ಸುಳಿವುಗಾಣದುದಕ್ಕೆ ಮಿತಿಮೀರಿ ವ್ಯಾಕುಲರೂ ಕ್ಷುಬ್ಧರೂ ಆಗಿಬಿಟ್ಟರು.** ದಿನದಿನಕ್ಕೆ ಅವರ ಅಧೀರತೆಯು ಹೆಚ್ಚುತ್ತಬಂದು ಕೊನೆಗೆ ತನ್ನೊಳಗೆ ಯಾವದೋ ಒಂದು ದುಷ್ಟ ಆತ್ಮವು ಸೇರಿಕೊಂಡಿದೆ

---

* ಹೃದಯದಲ್ಲಿ ಮುದ್ರೆಯೊತ್ತಿದಂತಾದ ಈ ದಿವ್ಯದರ್ಶನವು ಬ್ರಹ್ಮಸಂಸ್ಪರ್ಶವೆಂಬ ಅವಸ್ಥೆ. ಇದಕ್ಕಿಂತ ಮುಂಚೆ ಕೆಲದಿನಗಳ ಹಿಂದೊಮ್ಮೆ ಬರೀ ಕೆಲವು ಗೂಢ ಚಮತ್ಕಾರಗಳು ಘಟಿಸಿದ್ದವು. ಅವುಗಳ ಅರ್ಥವನ್ನು ಆಗ ಅವರಿಗೆ 'ವರಾಖ' ನೆಂಬೊಬ್ಬ ಸಚ್ಛೀಲನಾದ ವೃದ್ಧ ಭಕ್ತನು ತಿಳಿಸಿಹೇಳಿದ್ದನು. ಅದೇ ಅವರ 'ಪ್ರಥಮ ಪರಿಚಯ'ವೆಂಬ ಪ್ರಾಥಮಿಕ ಅವಸ್ಥೆಯು.

ಯೆಂದು ಬಗೆದು ಪುನಃ ತಮ್ಮನ್ನು ತಾವು ಸಂಹರಿಸಿಕೊಳ್ಳುವುದಾಗಿ ನಿಶ್ಚಯಿಸಿಕೊಂಡು ಅದೇ ಉದ್ದೇಶದಿಂದ ಅತ್ತಿತ್ತ ಅಡ್ಡಾಡುತ್ತ ಒಂದು ಗಿರಿಶಿಖರವನ್ನೇರಿ ಜಿಗಿದುಕೊಳ್ಳುವಷ್ಟರಲ್ಲಿ ಆಕಾಶದಲ್ಲೊಂದು ಶೋಭಾಯಮಾನವಾದ ಸಿಂಹಾಸನದಲ್ಲಿ ಮಂಡಿಸಿದ ದೇವದೂತನೊಬ್ಬನು ಕಾಣಿಸಿಕೊಂಡು– 'ಎಲಾ, ನಾನು ದೇವದೂತನು! ನೀನು ದೇವ ಪ್ರೇರಿತನು!' ಎಂದು ಹೇಳಿ ಅವರನ್ನು ಸಂತೈಸಿದನು.''

ಕ್ರಿಸ್ತದೇವನಿಗಿಂತ ಮುಂಚೆ ಸುಮಾರು ಒಂದು ಸಾವಿರ ವರುಷಗಳ ಪೂರ್ವದಲ್ಲಿ ನಮ್ಮ ಭರ್ತೃಹರಿಗೆ ಸಮಾನನಾದ ಸೋಲೋಮೋನನೆಂಬ ವಿದ್ಯಾ–ವೈಭವ–ಜ್ಞಾನ-ವಿನಯಗಳ ಮಹಾನಿಧಿಯಾದ ಚಕ್ರವರ್ತಿಯೊಬ್ಬನು ಆಗಿಹೋದನೆಂಬುದು ಇಂಗ್ಲೀಷು ಬಲ್ಲವರಿಗೆಲ್ಲ ಗಾದೆಯ ಮಾತಾಗಿದೆಯಷ್ಟೆ? ಆತನ ತಂದೆಯಾದ ದಾವೀದನು ಮಹಾಭಗವದ್ಭಕ್ತನೆಂಬುದೂ ಅಷ್ಟೇ ಪ್ರಸಿದ್ಧ ವಿಷಯವಾಗಿದೆ. ಈ ಭಕ್ತಶಿಖಾಮಣಿಯು ಬರೆದ ಭಕ್ತಿಗೀತಗಳು ಬಾಯ್ಬಲ್ಲಿನ ಹಳೇ ಒಡಂಬಡಿಕೆಯ ಶಿರೋರತ್ನಗಳು. ಅವುಗಳಲ್ಲಿ ಮೂವತ್ತನೆಯ ಗೀತವು ಆ ರಾಜರ್ಷಿಯ ಆತ್ಮಿಕ ಕಾಳರಾತ್ರಿಯ ಹೆಗ್ಗುರುತಾಗಿದೆ. ಆ ಗೀತವನ್ನೇ ಆಧಾರವಾಗಿಟ್ಟು 'ಥಾಮಸ್ ಆ ಕೆಂಪಿಸ್' ಎಂಬ ಪುರಾತನ ಮಹಾ ಅನುಭಾವಿಯು ತನ್ನ 'ಇಮಿಟೇಶನ್ ಆಫ್ ಕ್ರೈಸ್ಟ್' (ಕ್ರಿಸ್ತದೇವಾನುಕರಣ) ವೆಂಬ ಗ್ರಂಥದ ದ್ವಿತೀಯ ಖಂಡದ ಒಂಬತ್ತನೇ ಅಧ್ಯಾಯದಲ್ಲಿ ದೇವಾನುಗ್ರಹದ **ಪುನಲೋಪ**ವನ್ನು ಕುರಿತು ಒಳ್ಳೇ ಹೃದಯಂಗಮವಾಗಿ ಹೀಗೆ ಬಣ್ಣಿಸಿದ್ದಾನೆ:—

'' ಆಶ್ವಾಸನವು ಇಲ್ಲದಾದರೂ ನಿರಾಶೆಬೇಡ; ವಿನಯದಿಂದ, ತಾಳ್ಮೆಯಿಂದ ದೇವಾನುಗ್ರಹದ ಪುನರ್ದರ್ಶನಕ್ಕಾಗಿ ಕಾಯ್ದುಕೊಂಡಿರು; ಮತ್ತೊಮ್ಮೆ ಬಂದಾಗ ದೇವನು ಹೆಚ್ಚಿನ ಆಶ್ವಾಸನವನ್ನು ಕೊಡಲು ಶಕ್ತನಿದ್ದಾನೆ. ಆಧ್ಯಾತ್ಮಜೀವಿಗಳಿಗೆ ಇದೇನು ಹೊಸದಾದ, ಆಶ್ಚರ್ಯಕರವಾದ ಅನುಭವವಲ್ಲ. ಈ ಹಗಲಿರುಳಿನ ಪಲ್ಲಟವು ಮಹಾ ಸಾಧುಗಳಲ್ಲಿಯೂ ಪ್ರಾಚೀನ ಪ್ರವಾದಿಗಳಲ್ಲಿಯೂ ಕಂಡು ಬರುವದು.

ದೇವಾನುಗ್ರಹ ಸುಖವನ್ನನುಭವಿಸುವಾಗ ಡೇವಿಡನೆಂಬುವನೊಬ್ಬನು ಎನ್ನುವದೇನೆಂದರೆ—" ನನ್ನ ಅಭ್ಯುದಯ ಕಾಲದಲಿ ನಾನೊಂದಿಷ್ಟೂ ವಿಚಲಿತನಾಗಲಾರೆ " ಎಂದೆ.

ಆದರೆ ಅನುಗ್ರಹವು ಲೋಪವಾದೊಡನೆ ಅವನಿಗೆ ಬಂದ ಅನುಭವದ ವರ್ಣನೆಯನ್ನು ಅವನು ಆ ಮೇಲೆ ಹೀಗೆ ಮಾಡುವನು—ನೀನು ನಿನ್ನ ಮೊಗಮುಚ್ಚಿಕೊಂಡಾಗ ಅಯ್ಯೋ ನಾನು ಕಷ್ಟಬಟ್ಟೆ.

ಅವನು ನಿರಾಶನಾಗಲಾರನು; ಮತ್ತಿಷ್ಟು ಅಗತ್ಯದಿಂದ ಪ್ರಾರ್ಥಿಸುವದೇನೆಂದರೆ—ಪ್ರಭುವೇ ನಿನಗೆ ಕೂಗಿಕೊಂಡೆ, ನಿನಗೆ ಬೇಡಿಕೊಂಡೆ.

ಕೊನೆಗೆ ಅವನ ಪ್ರಾರ್ಥನೆಯು ಫಲರೂಪವಾಗಿ ಅವನ ಮೊರೆಯನ್ನು ದೇವನು ಕೇಳಿದನೆಂದು ಅವನೇ ಹೇಳುತ್ತಾನೆ—" ಪ್ರಭುವು ನನ್ನ ಮೊರೆ ಕೇಳಿದನು, ನನ್ನ ಮೇಲೆ ಕೃಪೆ ಮಾಡಿದನು. " ಅದು ಹೇಗೆ ? " ನೀನು ನನ್ನ ದುಃಖದುಮ್ಮಾನವನ್ನು ಸುಖದ ನೃತ್ಯದಲ್ಲಿ ಪಲ್ಲಟಿಸಿದೆ.

ಈ ಗತಿಯು ದೊಡ್ಡವರದಾದ ಮೇಲೆ ನಮ್ಮಂಥ ಬಡಪ್ರಾಣಿಗಳು ಉದ್ವಿಗ್ನರಾಗಬಾರದು-ಚಳಿಗಾಲವಿದೆ, ಬಿಸಿಲುಗಾಲವಿದೆ. ಅವನ ಇಚ್ಛಾನುಸಾರವಾಗಿ ಆನಂದಾತ್ಮವು ಬರುವದು, ಹೋಗುವದು. "

ಮೊದಲಿಗೆ ನಾವು ಹಿಂದುಸ್ಥಾನದ ನವಯುಗ ಪ್ರವರ್ತಕರ ಹಾಗು ಪುರಾತನ ಮಹಾ ಪುರುಷರ ಜೀವನದಲ್ಲಿ ಮಧ್ಯರಂಗವನ್ನು ಕಂಡುಕೊಂಡು ಆ ಮೇಲೆ ಇದೀಗ ಪರದೇಶದ ಪುರಾತನ ಮಹಾತ್ಮರ ಜೀವನದಲ್ಲಿಯೂ ಅದರ ಸ್ಪಷ್ಟದರ್ಶನವನ್ನು ಪಡೆದುಕೊಂಡೆವಷ್ಟೇ ? ಇನ್ನು ನಮ್ಮ ಒಳನಾಡಿನ ಹಾಗೂ ನೆರೆನಾಡಿನ ಪುರಾತನ ಅಧ್ಯಾತ್ಮಿಗಳ ಕಡೆಗಿಷ್ಟು ಹೊರಳೋಣವೆ ?

ಶ್ರೀ. ಬಸವಣ್ಣನವರ ಈ ಮುಂದಿನ ವಚನಗಳು ಅವರ ಕಾಳರಾತ್ರಿಗೆ ಸಾಕ್ಷಿಯನ್ನು ಕೊಡುತ್ತಿವೆಯೆಂಬುದರಲ್ಲಿ ಎಳ್ಳಷ್ಟೂ ಸಂದೇಹ ವಿಲ್ಲ. ಅವು ಯಾವವೆಂದರೆ—

" ಶಿವಭಕ್ತನಾಗಿ ತನ್ನ ಹಿಡಿದಿಹೆನೆಂದು ಹೋದರೆ ನುಗ್ಗು ಮಾಡುವ–ನುಸಿಯುಮಾಡುವ; ಮಣ್ಣುಮಾಡುವ–ಮುಸಿಯುಮಾಡುವ. ಕೂಡಲ ಸಂಗಮದೇವರ ನೆರೆನಂಬಿದನಾದರೆ ಕಡೆಗೆ ತನ್ನಂತೆ ಮಾಡುವ. "

" ಅರೆವನಯ್ಯಾ ಸಣ್ಣನಾಹನ್ನಕ್ಕ; ಒರೆವನಯ್ಯಾ ಬಣ್ಣಗಾಂಬನ್ನಕ್ಕ. ಅರೆದರೆ ಸಣ್ಣನಾಗಿ, ಒರೆದರೆ ಬಣ್ಣವಾದರೆ ಕೂಡಲ ಸಂಗಮದೇವನೊಲಿದು ಸಲಹುವನು. "

ಶ್ರೀ. ಬಸವಣ್ಣ, ಸಿದ್ಧರಾಮ, ಮಹಾದೇವಿ ಇವರಂಥ ಅಧೀರ ಸಾಧಕರಲ್ಲಿ ಈ ಕಾಳರಾತ್ರಿಯ ಕಾಟವು ಬಹು ಕರಾಳವಾಗಿ ಕಾಣಿಸಿಕೊಂಡರೂ ಅಲ್ಲಮಪ್ರಭುಗಳಂಥ ಅನುದ್ರಿಕ್ತಧೀರ ಸಾಧಕರಲ್ಲಿ ಅದರ ಛಾಯೆ ಅಲ್ಪಸ್ವಲ್ಪವಾದರೂ ಕಾಣಿಸಿಕೊಳ್ಳದೆ ಬಿಟ್ಟಿಲ್ಲ. ' ನಿಮ್ಮ ನೆನಹಾದಾಗಳೆ ಉದಯ, ಮರೆಹಾದಾಗಳೆ ಅಸ್ತಮಾನ ' ಮುಂತಾದ ಸೌಮ್ಯಸಂಕಟದ ವಚನಗಳನ್ನು ಅವರ ಮುಖದಿಂದಲೂ ನಾವು ಕೇಳಬಲ್ಲೆವು.

ಇದಿರಲಿ. ಇನ್ನು ಮಹಾರಾಷ್ಟ್ರದ ಕಡೆಗೆ ಹೊರಳುವಾ—ಅಲ್ಲಿ ಶ್ರೀ. ತುಕಾರಾಮ ಹಾಗೂ ನಾಮದೇವ ಮುಂತಾದವರ ಕಾಳರಾತ್ರಿಯು ಘನಘೋರವಾಗಿಯೂ ಶ್ರೀ. ಜ್ಞಾನೇಶ್ವರ ಹಾಗೂ ಸಮರ್ಥ ರಾಮದಾಸರಲ್ಲಿ ಅತಿ ಕಿಂಚಿತ್ತಾಗಿಯೂ ಕಾಳರಾತ್ರಿಯ ಕುರುಹನ್ನು ಕಾಣಬಲ್ಲೆವು. ಶ್ರೀ. ರಾಮದಾಸರು ತಮ್ಮದೊಂದು ಚಿಕ್ಕ ಪ್ರಕರಣ ಗ್ರಂಥದಲ್ಲಿ ಬ್ರಹ್ಮಾಂಡದ ಚತ್ವಾರದೇಹಲಯ ಕ್ರಮದಲ್ಲಿ ಚಿತ್ಸೂರ್ಯಮಂಡಲ ಮತ್ತು ಚಿಚ್ಚಂದ್ರ ಮಂಡಲಗಳೆಂಬ ಸಂಕೇತಗಳಿಂದ ವಿವರಿಸಿದ ಅವಸ್ಥೆಗಳನ್ನು ಕುರಿತು ಹೇಳುವಲ್ಲಿ–ಚಂದ್ರಮಂಡಲದ ಅನುಭವದ ಅನಂತರ ಪುನಃ ಅತ್ಯುಗ್ರರೀತಿಯಿಂದ ಸಾಧಕನ ಅವಸ್ಥೆ ಹಿಂದಿನ ಸೂರ್ಯಮಂಡಲದ ಕಡೆಗೆ ಹೊರಳುತ್ತಿದೆಯೆಂದು ಮುಂಜಾಗ್ರತೆಯನ್ನು ಸೂಚಿಸಿದ್ದಾರೆ.

ಅದು ಹೇಗೆಂದರೆ:—

'ಧಾರಿಷ್ಟ ತೇಥೇ ನ ನಿಭತ
ದುರ್ಘಟ ವಿಭು ತೇಥೀಚಾ ॥
ತೇಥೇ ಹುಶಾರೀಚೇ ಕಾವು
ಅಗ್ರೀಲಕ್ಷ್ಯ ಘಾಲೂನಿ ನೇವು ॥
ತೀರ ಲಾವೂನ ಸುಗವು
ಮಾಗೇ ಸಾರೀ ಸೂರ್ಯಾತೇ ॥'

"ಅಲ್ಲಿ ಮಹಾ ಧೈರ್ಯಶಾಲಿಯೂ ಕೂಡ ನಿಸ್ತರಿಸಿ ನಿಲ್ಲಲಾರನು. ಆದರ ಅಧಿಷ್ಠಾತೃವು ಅಂಥಾ ದುರ್ಘಟಸ್ವರೂಪನು. ಆದುದರಿಂದ ಅಲ್ಲಿ ಬಹಳೇ ಎಚ್ಚರದಿಂದಿರಬೇಕಾದ ಅಗತ್ಯವಿದೆ. ನೆಟ್ಟಗೆ ಇದಿರಿಗೇ ಲಕ್ಷ್ಯವನ್ನಿಟ್ಟು ಗುರಿಯ ಕಡೆಗೇ ಹೊರಟರೆ ಮಾತ್ರ ಸುಗಮವಾಗುವದು. ಯಾಕೆಂದರೆ ಅಲ್ಲಿ ಪುನಃ ಸೂರ್ಯ ಮಂಡಲದ ಕಡೆಗೆ ಹಿಂದಿರುಗುತ್ತಿರುತ್ತದೆ."

ಇನ್ನೇನು? ಹಿಂದುಸ್ಥಾನದಲ್ಲೆಲ್ಲಾ ಒಂದಾನೊಂದು ಕಾಲದಲ್ಲಿ ಅತ್ಯಂತ ಪ್ರಖ್ಯಾತ ಸ್ಥಿತಿಯಲ್ಲಿದ್ದ ಜೈನಶಾಸನವೇನೆನ್ನುತ್ತಿದೆ? ನೋಡೋಣವೇ? ಆ ಶಾಸ್ತ್ರದಲ್ಲಿ ಧ್ಯಾನಾವಸ್ಥೆಯನ್ನು ಎರಡು ವರ್ಗವಾಗಿ ವಿಭಾಗಿಸಲಾಗಿದೆ. ಒಂದರ ಹೆಸರು ಧರ್ಮಧ್ಯಾನ, ಇನ್ನೊಂದು ಶುಕ್ಲಧ್ಯಾನ. ಹಿಂದೆ ಇದುವರೆಗೆ ವರ್ಣಿಸುತ್ತ ಬಂದಿರುವ ಎರಡು ಮಹಾ ಅವಸ್ಥೆಗಳಿಗೇ ಇವು ಪರ್ಯಾಯನಾಮಗಳಾಗಿವೆ. ಪ್ರಗಾಢ ಸ್ಪರ್ಶ ಮತ್ತು ಮಹಾದಿವ್ಯಾವಸ್ಥೆಯೆಂದು ನಾನು ಸಂಕೇತಮಾಡಿದ ಎರಡು ಮುಖ್ಯಾವಸ್ಥೆಗಳೇ ಇವು. ಇವುಗಳ ವಿಶದ ವರ್ಣನೆಯು ಪ್ರಾಚೀನ ಸಂಸ್ಕೃತ ಪ್ರಾಕೃತ ಜೈನ ಗ್ರಂಥಗಳಲ್ಲಿರುವುದಕ್ಕಿಂತ ಸ್ಪಷ್ಟವಾಗಿಯೂ ಹೃದಯಂಗಮವಾಗಿಯೂ ಎಲ್ಲಿಯಾದರೂ ಸಿಕ್ಕಬಹುದೆಂದರೆ ಅದು ನಮ್ಮ ಕನ್ನಡನಾಡಿನ ಹಿಂದಿನಕಾಲದ ಮಹಾ ಅನುಭಾವ ಕವಿಯಾದ ರತ್ನಾಕರಸಿದ್ಧನ ಭರತೇಶ ವೈಭವದಲ್ಲಿಯೇ– ಅಲ್ಲಿ ಅವನು ಇವೆರಡೂ ಧ್ಯಾನಗಳನ್ನು ಹೀಗೆ ಬಣ್ಣಿಸಿದ್ದಾನೆ—

ಹಲವ ಚಿಂತಿಸುವುದು ಸ್ವಾಧ್ಯಾಯ; "ಮನವೊಂದ।
ರೊಳೆ ನೆಲಸಿರಲದು ಧ್ಯಾನಾ" ॥
ಇಳೆಯೊಳಿನ್ನಾ ಧ್ಯಾನ ಧರ್ಮವೆಂದುಂಟು ನಿ।
ರ್ಮಲ ಶುಕ್ಲವೆಂದುಂಟು ಕೇಳು ॥೧॥

ಕಣ್ಮುಚ್ಚಿ ನೋಡಿದರೊಳಗಾತ್ಮ ನಸುಕಾಂತಿ।
ವೊಣ್ಮೆ ತೋರುತ ಶೂನ್ಯವಡುತ॥
ಜಾಣ್ಮೆದೋರುತ ನಸು ಸುಖದೋರುತಿರಲದು।
ನುಣ್ಮಾತಿನೊಳು ಧರ್ಮವಹುದು ॥೨॥

ಚರ್ಮದೃಷ್ಟಿಯ ಮುಚ್ಚಿ ನೋಡಲಾತ್ಮನು ಸೂರ್ಯ।
ಕಾರ್ಮುಗಿಲೆಡೆಯೊಳಿಪ್ಪಂತೆ॥
ನಿರ್ಮಲದೊಳು ತೋರಿ ಸುಜ್ಞಾನ ಸುಖಗಳ।
ನಿರ್ಮಿಸಲದು ಶುಕ್ಲಯೋಗಾ ॥೩॥

ಅರಿವು ಬೆಳಗು ಸುಖ ಕಿರಿದಾಗಿ ತೋರುತ।
ಮರೆಸುತಹುದು ಧರ್ಮಯೋಗಾ॥
ಅರಿವು ಬೆಳಗು ಸುಖ ಪಿರಿದಾಗಿ ತೋರುತ।
ಮರೆಸದಹುದು ಶುಕ್ಲಯೋಗಾ ॥೪॥

ಗಾಳಿಯು ಸೊಡರಂತೆ ಕಂಪಿಸುತೊಳಗಾತ್ಮ।
ಥಾಳಿಸುತಿರಲದು ಧರ್ಮಾ॥
ಗಾಳಿಗಾಗದ ಸೊಡರಂತೆ ನಿಷ್ಕಂಪದಿ।
ಥಾಳಿಸುತಿರಲದು ಶುಕ್ಲಾ ॥೫॥

ಎಳೆವೆರೆ ಬೆಳೆವಂತೆ ಚಿತ್ಕಳೆ ಮೆಲ್ಲನೆ।
ಬೆಳೆದು ಬಹುದು ಧರ್ಮಯೋಗಾ॥
ಎಳೆನೇಸರದು ನಡುವಗಲಿಗಡರುವಂತೆ।
ನಳಿನಳಿಪುದು ಶುಕ್ಲಯೋಗಾ ॥೬॥

ಮಳೆಯು ನೀರುರ್ಮಿಯು ಕೊರೆವಂತೆ ಕರ್ಮ ಸಂ।
ಕುಳವ ನಿರ್ಜರಿಪುದು ಧರ್ಮ।
ಹೊಳೆಯು ನೀರುರ್ಮಿಯು ಕೊರೆವಂತೆ ಕರ್ಮ ಸಂ।
ಕುಳವ ನಿರ್ಜರಿಪುದು ಶುಕ್ಲ ॥ ೭ ॥

ಒಂದಲ್ಪಕಾಂತಿ ಮತ್ತೊಂದು ಮಹಾ ಕಾಂತಿ।
ಯೆಂದಿಷ್ಟು ಭೇದಗಳೈಸೆ ॥
ಒಂದಲ್ಲದೆರಡಿಲ್ಲವೇಕಂದರವಕಾತ್ಮ।
ನೊಂದಲ್ಲದಾಧಾರವಿಲ್ಲ ॥ ೮ ॥

ಹೀಗೆಂದು ಮೋಕ್ಷಮಾರ್ಗ ಸಂಧಿಯಲ್ಲಿ ರಮ್ಯವಾಗಿ ವರ್ಣಿಸಿರುವನಲ್ಲದೆ ಭೋಗವಿಜಯದ ಪರ್ವಯೋಗಸಂಧಿಯಲ್ಲಿ ಭರತೇಶ ಚಕ್ರಿಯು ಧರ್ಮಯೋಗವನ್ನು ವರ್ಣಿಸುವಾಗ ಕಾಳರಾತ್ರಿಯ ಸ್ಪಷ್ಟಸ್ವರೂಪವನ್ನು ತೋರಿಸಿಕೊಟ್ಟಿದ್ದಾನೆ. ಅದು ಹೇಗೆಂದರೆ—

ತನು ಮಿಸುಕದು ಮನ ಮಿಸುಕದು ಮತ್ತೊಂದು।
ನೆನಹಿಲ್ಲ ತನ್ನ ತಾನಿಪ್ಪ ॥
ತನುವ ಸೋಂಕಿಯುಂ ಸೋಂಕದಿರ್ದನು ಸಿದ್ಧರ।
ತನು ವಾತಸೋಂಕದಿರ್ಪಂತೆ ॥ ೧ ॥

ಪರಿಪೂರ್ಣ ಚಂದ್ರಮಂಡಲದೊಳಡಗಿದಂತೆ।
ಯಿರುತಿಹನಾತ್ಮಕಾಂತಿಯೊಳು ॥
ಪರಿದು ಕಾರ್ಮುಗಿಲು ಚಂದ್ರಗೆ ಕವಿದಂತೆ ಮೋ।
ಹರಿಸುವುದೊಡನಂಧಕಾರ ॥ ೨ ॥

ಇನಿಸು ಬೇಗದೊಳಂಧಕಾರ ಹರಿವುದು ಹಂ।
ಸನ ಪ್ರಭೆ ಕೂಡೆ ತೋರುವುದು ॥
ಅನಿತರೊಳದು ಮಾಸುವುದು ಕೂಡೆ ಹೊಳೆವುದು
ಕನಸಿಸಂತರೆ ನಿದ್ರೆಯಂತೆ ॥ ೩ ॥

**ಪ್ರಭೆ ತೋರಿದಾಗ ಬ್ರಹ್ಮಾನಂದ ವಪ್ಪುದಾ।**
**ಪ್ರಭೆ ಮಾಸಲೊಡನೆ ನೋವಹುದು ॥**
**ಅಭಯ ಮುಕ್ತಿಯು ಸುಖ ಸಂಸಾರದುಃಖವಂ।**
**ಬುಭಯವ ಪರಿಕಿಸುತಿಹನು ॥ ೪ ॥**

ಮತ್ತೇನು ಬೇಕು? ಶ್ರುತಿಪ್ರಮಾಣವೆ? ಹಾಗಾದರೆ ಇಕೊಳ್ಳಿರಿ–

" ಅಸತೋ ಮಾ ಸದ್ಗಮಯ।
ತಮಸೋ ಮಾ ಜ್ಯೋತಿರ್ಗಮಯ ॥ "

'ಇಲ್ಲ ಇಲ್ಲ ಅನ್ನುವಂಥ ಅವಸ್ಥೆಯನ್ನು ನೀಗಿಸಿ ಇದೆ ಇದೆ ಎಂದೆನ್ನುವಂಥ ಅವಸ್ಥೆಗೆ ಒಯ್ಯಯ್ಯಾ। ಮತ್ತೆ ಅಂಧಂತಮಸ್ಸಿನೊಳಗಿಂದ ಮಹಾ ಪ್ರಕಾಶದೆಡೆಗೆ ನಡೆಯಿಸಯ್ಯಾ' ಎಂಬ ಋಷಿಮುಖದ ಉದ್ಗಾರವು ನಿಮಗೆ ಹೇಗೆ ತೋರುತ್ತಿದೆ? ದೇವನ ಅಸ್ತಿತ್ವದ ಘನಘನ ಅನುಭವದ ಅನಂತರದಲ್ಲಿಯೂ ಕೂಡ ಅಂತರಾತ್ಮವು ಇನ್ನೂ ಕತ್ತಲೆಗೆ ಕಾತರಿಸುತ್ತಿದೆಯಲ್ಲ! ಮೊದಲು ಅಸತ್ತಿನಿಂದ ಸತ್ತಿಗೆ ಪಯಣ. ಆ ಮೇಲೆ ತಮಸ್ಸಿನಿಂದ ಮಹಾಜ್ಯೋತಿಯ ಕಡೆಗೆ! ಇದೇ ಮಧ್ಯರಂಗದ ಕಾಳರಾತ್ರಿಯಲ್ಲವೇ?

ಈ ವಿಷಯದಲ್ಲಿ ಅರವಿಂದರ ಅತುಲವಾಕ್ಯವನ್ನಿಲ್ಲಿ ನೋಡಬನ್ನಿರಿ–

" ವೈದಿಕ ಋಷಿಗಳನ್ನು ಕೂಡ ಗುಣುಗುಂಟ್ಟಿಸಿ ಬಿಡುವ ಸತ್ತ್ವಪರೀಕ್ಷೆಯ ಮಬ್ಬು ನಮ್ಮನ್ನು ಕವಿಯಬಹುದು; ಕತ್ತಲೆಯು ಆತ್ಮವನ್ನು ಕಂಗೆಡಿಸುವಷ್ಟು ಕಠ್ರಗಾಗಿ ಶ್ರದ್ಧೆಯೂ ನಮ್ಮ ಕೈ ಬಿಟ್ಟಿತೋ ಎನ್ನಿಸಬಹುದು. ಆದರೂ ಈ ಕಾಲದಲ್ಲೆಲ್ಲ ಅಂತರಾತ್ಮವು ತನ್ನ ಹಿಡಿತವನ್ನು ಸಡಿಲಿಸಲಾರದು; ನವಶಕ್ತಿಯನ್ನು ಪಡೆದು ಆತ್ಮವು ಅಸ್ತವಾದಂತೆ ತೋರಿದರೂ ಕೆಲಕಾಲ ಮಾತ್ರ ಗ್ರಸ್ತವಾದ ನಿಶ್ಚಯಕ್ಕೆ ಮರಳಿ ಬರುವದು. ಅಂತರಾತ್ಮವು ತನ್ನ ತಾನರಿದು ಒಮ್ಮೆ ಸಂಕಲ್ಪವನ್ನು ಮಾಡಿದ ಮೇಲೆ ನಿಶ್ಚಯವು ನಿರ್ನಾಮವಾಗಲರಿಯದು. ಹಾದಿಗುಂಟ ದೈವವು ನಮ್ಮ ಕೈಹಿಡಿದು ನಡೆಸುವದು; ಕೆಡಹಿದಂತೆ ತೋರಿದರೆ

ಇನ್ನಷ್ಟು ಮೇಲಕ್ಕೆತ್ತಲೆಂದೇ ಹಾಗೆ ಮಾಡುವದು. ಈ ಉದ್ಧಾರಕವಾದ ಪುನರಾವರ್ತನದ ಮೂಲಕ ಸಂಶಯದ ನಿರಾಕರಣೆಗಳು ತಾವೇ ನಿಂತುಹೋಗುವವು. ಸಮಬ್ರಹ್ಮದ ಸಿದ್ಧಿಯಾಗಿ ಒಮ್ಮೆ ವಿಜ್ಞಾನ ಸೂರ್ಯೋದಯವಾಯಿತೆಂದರೆ ಸಂಶಯದ ಮೂಲೋತ್ಪಾಟನವೇ ಆಗಿ ಬಿಡುವದು; ಯಾಕೆಂದರೆ ಅದರ ಕಾರಣವೂ ಉಪಯೋಗವೂ ತೀರಿ ಹೋಗುವದು."

೭

ಈವರೆಗಿನ ವಿವೇಚನೆಯನ್ನೆಲ್ಲಾ ನೋಡಿದ ಮೇಲೆ ವಾಚಕರಿಗೆ ಒಂದು ಸಂದೇಹವಿಲ್ಲಿ ಬರುವ ಸಂಭವವಿದೆ. ಅದೇನೆಂದರೆ—ಜ್ಞಾನ ಭಿಕ್ಷುವನ್ನು ಅವತಾರಿಗಳ ಹಾಗೂ ಮಹಾ ವಿಭೂತಿಗಳ ಮಾಲಿಕೆಯಲ್ಲಿ ಸೇರಿಸುವುದಿದೊಂದು ಚಾತುರ್ಯವಾಗಿರಬಹುದೇನು? ಆದರೆ ನಿಮಗೆ ನಾನು ಸತ್ಯ ಸತ್ಯವಾಗಿ ಹೇಳುತ್ತೇನೆ: ಸ್ವತಃ ಆತನಾಗಲಿ ಅವನ ಅಧ್ಯಾತ್ಮಜೀವನದ ನಿರೀಕ್ಷಕನಾದ ನಾನಾಗಲಿ ಹಾಗೆ ಎಂದೂ ಭಾವಿಸಿಲ್ಲ. "**ಅಂಥವರ ಶಿಶು**" ಎಂಬುದರಲ್ಲಿ ಮಾತ್ರ ಎಳ್ಳಷ್ಟೂ ಸಂದೇಹವಿಲ್ಲವೆಂದು ಸಾವಿರ ಸಾರೆ ಹೇಳುವೆನು. ಒಟ್ಟಾರೆ ಈಗ ಆತನಿಗೆ–ಜಗತ್ತಿನ ಸರ್ವ ಸಿದ್ಧಪುರುಷರ ಜೀವನದಲ್ಲಿ ಕಾಳರಾತ್ರಿಯು ಅವಶ್ಯಂಭಾವಿತ್ವದ ಬಗೆಗೆ ಮನವರಿಕೆಯಾಯಿತೆಂಬುದನ್ನು ತೋರಿಸಿ ಕೊಡುವುದಿಷ್ಟೇ ನನ್ನ ಉದ್ದೇಶವಲ್ಲದೆ ಅನ್ಯಥಾ ಭಾವಿಸಲು ಅವಕಾಶ ವಿಲ್ಲ. "ಇದು ಪತನವಲ್ಲ, ಅವಶ್ಯಂಭಾವಿಯಾದ ಒಂದು ಅವಸ್ಥೆ" ಎಂಬುದರ ಸಾಂದ್ರವಾದ ಅನಿಸಿಕೆಯು ಆತನಲ್ಲಿ ಹೇಗೆ ಮೂಡಿತೆಂಬು ದಷ್ಟಂತೂ ಇದುವರೆಗೆ ತೋರಿಸಿಕೊಟ್ಟಂತಾಯಿತು. ಇನ್ನು ಮುಂದೆ ಆತನ ಜೀವನದ ಘಟನೆಗಳ ಕಡೆಗೆ ಹೊರಳುವಾ.

ಇದೀಗ ಆತನ ಅಂತರಾಳದಲ್ಲಿ–ಒಂದಿಲ್ಲೊಂದು ದಿನ ತಾನು

ಕಾಳರಾತ್ರಿಯ ಕೈಯೊಳಗಿಂದ ಪಾರಾಗುವೆನೆಂಬ ಭರವಸೆ ಬಲವಾಗಿ ಬೇರೂರಿಕೊಂಡಿತಾದರೂ, ಅದರ ಅವಧಿಯು ಇಷ್ಟೇ ಎಂಬುದು ಗೊತ್ತಾಗಲಾರದ್ದರಿಂದ ಅಂತಃಕರಣವು ಈಗಲೂ ಅಸವಸಗೊಳ್ಳುತ್ತಲೇ ಇತ್ತು. ದೈವನಿರ್ಣಯಿತ ಕಾಲವು ಬರುವವರೆಗೆ ಈ ಬೇಗೆಯನ್ನು–ಅದೆಷ್ಟೇ ಭಾವೀಕಲ್ಯಾಣದ ಬೀಜವಾಗಿದ್ದರೂ–ಧಾರಣಮಾಡಿಕೊಳ್ಳುವುದು ಹೇಗೆ? ವಿಷಕಂಠನಾಗುವ ಬಲವಿಲ್ಲವಲ್ಲಾ! ಆದುದರಿಂದ ಆತನು ತಲೆಯಲ್ಲಿ ಒಂದು ಆಲೋಚನೆಯನ್ನು ಹೀಗೆ ಮಾಡಿದನು—'ಈ ವರುಷದ ಡಿಸೆಂಬರ್ ತಿಂಗಳಲ್ಲಿ ಅಂಥ ಮಹತ್ತರವಾದ ಪಲ್ಲಟವೇನೂ ಆಗದಿದ್ದರೆ ಮುಂದೆ ಸ್ವಸ್ಥಾನವನ್ನು ಪರಿತ್ಯಜಿಸಿ ಆತ್ಮಶಿಶುವಿಗೆ ಹಾಲೂ ಜೇನೂ ಸಿಕ್ಕುವ ಪ್ರದೇಶಕ್ಕೆ ಪಲಾಯನ ಹೇಳಿಸಬೇಕು. ಮೊದಲನೆಯದು ಅರವಿಂದರ ಆಶ್ರಮ, ಅದು ಶಕ್ಯವಾಗದಿದ್ದರೆ ಎರಡನೆಯದು ನೀಲಗಿರಿಯ ರಮ್ಯ ಮುಕ್ತಸೃಷ್ಟಿಯ ಸಹವಾಸ, ಅದೂ ಸಾಧಿಸದಿದ್ದರೆ ಕಜಿನ್ಸರಂಥ ಉದಾರ ಅಧ್ಯಾತ್ಮಿಗಳ ನೆರವಿಯಲ್ಲಿ ಇದ್ದಷ್ಟರಲ್ಲೇ ರಮಣೀಯವಾದ ಮತ್ತು ನಿವಾಂತವಾದ ಯಾವದಾದರೊಂದೆಡೆಯಲ್ಲಿ ಇದ್ದುಬಿಡುವುದು ಮೂರನೆಯದು, ಅದು ಕೂಡ ಲಭಿಸದಿದ್ದರೆ...... ......(ಏನೋ ದಿಗ್ಭ್ರಮೆ)?

ಹೀಗೆಲ್ಲಾ ಆಲೋಚಿಸುತ್ತಿದ್ದ ಹಾಗೆಯೇ ಇತ್ತ ತಿಂಗಳುಗಳು ಒಂದರ ಹಿಂದೊಂದು ಬಂದು ಹೋಗುತ್ತಿದ್ದವು. ಈ ವರುಷದಲ್ಲಿ ಪೌರಸ್ತ್ಯ ಪಾಶ್ಚಾತ್ಯ ಜ್ಯೋತಿಷ್ಯ ಗ್ರಂಥಗಳಲ್ಲಿ ಅತಿ ಮುಖ್ಯವಾದವುಗಳನ್ನೆಲ್ಲಾ ಬಹು ಕೂಲಂಕಷವಾಗಿ ಪರಿಶೀಲಿಸಿದ್ದಾಯಿತು. ಇದರ ಹಿಂದಿನ ವರುಷದಲ್ಲಿ ತಾನಾಗಿಯೇ ಪರ್ಜನ್ಯ ಜ್ಯೋತಿಷ್ಯದ ಮೂಲತತ್ತ್ವವು ಹೊಳೆದುದರಿಂದ ಇದೀಗ ಅದರೊಡನೆ ಆಟವಾಡುತ್ತ ಕಾಲಕ್ರಮಣ ಮಾಡುತ್ತಿದ್ದಾನೆ. ಜಾತಕಜ್ಯೋತಿಷ್ಯದಲ್ಲಿ ಜನ್ಮಕಾಲದ ಕುಂಡಲಿಯು ಎಷ್ಟೋ ಪ್ರಸಂಗಗಳಲ್ಲಿ ತೀರಾ ಸರಿಯಾಗಿಲ್ಲದಿರುವ ಸಂಭವವು ಅತಿಶಯವಾಗಿ ಇರುವಂತೆ ಇಲ್ಲಿಯೇನೂ ಅಂಥ ಯಾವ ತೊಂದರೆಯೂ ಇಲ್ಲ. ಗ್ರಹಯೋಗಗಳಿಗೂ ಮಳೆಗೂ ಇರುವ ಸಂಬಂಧವನ್ನು ಊಹಿಸುತ್ತಲೂ, ಬಹುತರವಾಗಿ ಅದರಂತೆ ಫಲಿತಾಂಶವು

ಸರಿಬಂದುದಕ್ಕೆ ಅಚ್ಚರಿಬಡುತ್ತಲೂ, ಕೆಲವಂಶದಲ್ಲಿ ತಪ್ಪಿದರೆ ಅದರ ನೂತನ ಕಾರಣವನ್ನು ಕಂಡು ಹಿಡಿಯುವುದರಲ್ಲಿ ಮಗ್ನನಾಗುತ್ತಲೂ ಅಂತೂ ಹೀಗೆ ಒಳ್ಳೇ ಚೆಲ್ಲಾಟದಲ್ಲಿ ಮಳೆಗಾಲ ಮುಗಿಯುವವರೆಗೂ ಲಹರಿಯಲ್ಲಿ ಹೊತ್ತು ನೂಕಿದನು. ಆದರೆ ಆತನ ವರ್ಷಕ್ರಮದ ಕಡು ಕಷ್ಟದ ಆರು ತಿಂಗಳುಗಳೆಂದರೆ ಇವೇಯೆಂಬುದು ನಮ್ಮ ವಾಚಕರು ಮರೆತಿರಲಿಕ್ಕಿಲ್ಲ. ಹಾಗಾದರೆ ಈ ವರುಷ ಕಷ್ಟನಷ್ಟಗಳಿಲ್ಲದೆ ಬರೇ ಹೀಗೆ ಚೆಲ್ಲಾಟದಲ್ಲಿಯೇ ಈ ಕಾಲವು ಗತಿಸಿದುದು ಹೇಗೆ? ಎಂದು ವಾಚಕರು ಸಂದೇಹಪಡುತ್ತಿರುವುದು ಸ್ವಾಭಾವಿಕ. ಇಲ್ಲಿ ಅದೆಲ್ಲಾ ಕಥೆಯನ್ನು ಹೇಳುವೆನು ಕೇಳಿರಿ—

ಹರ್ಷಲ್ಲನು ವಕ್ರಿಸಿದೊಡನೆ ಕಲ್ಪನಾತೀತ ರೀತಿಯಿಂದ ಕಷ್ಟ ಪರಂಪರೆಗೆ ಆರಂಭವಾಗಿ, ಆ ಗ್ರಹವು ತಿರುಗಿ ಸಹಜಗತಿಗೆ ಬರುವವರೆಗಿನ ಐದು ತಿಂಗಳ ಕಾಲವೆಲ್ಲಾ ಅದೇ ರೀತಿಯಲ್ಲಿ ಸಾಗುತ್ತಿದ್ದಿತಷ್ಟೇ? ಈ ವರುಷ ಗುರುವೆಂಬ ಸುಖಶಾಂತಿಗಳ ಗ್ರಹವು ಆ ಹರ್ಷಲ್ಲನ ಉಗ್ರತೆಯನ್ನು ಶಮನಗೊಳಿಸಲಿಕ್ಕಿದ್ದನು. ಆದುದರಿಂದ ಅದೊಂದು ಬಹಳೇ ವಿಲಕ್ಷಣ ಪ್ರಕಾರವು ನಡೆಯಿತು. ಅದೇನೆಂದರೆ— ಈ ವರುಷದ ಗ್ರಹಚಾರದ ಹಾವಳಿಯು ಸ್ವತಃ ಇವನ ಮೈಮೇಲೆ ಬಾರದೆ ಹೊಲ ಮನೆಗಳ ಮೇಲೆ ಮತ್ತು ತಾಯಿಯ ಮೇಲೆ ನಡೆಯಿತು. ಅದು ಹೇಗೆಂದರೆ—

ಮೊದಲಿಗೆ ಈತನ ತಾಯಿಯು ನೆರೆಹೊಲದ ಹಾಗೂ ತಮ್ಮ ಹೊಲದ ನಡುವಿರುವ ಸೀಮೆಯೊಳಗಿನ ಬೇಲಿಯ ಗಿಡಗಂಟಿಗಳನ್ನು ಆ ನೆರೆಯವರಿಗೆ ತಿಳಿಸದೆ ಕಡಿಸಿಬಿಟ್ಟಳು. ಅದಕ್ಕೆ ಅವರು ಇವರ ಹೊಲದ ಒಡ್ಡನ್ನು ಸ್ವಲ್ಪ ಕೆಡಿಸಿದರು. ಆಗ ಯಾರೋ ಒಬ್ಬರು ಇವಳಿಗೂ ಕೂಡ ಕೇಳದೆ ತಮ್ಮ ಸಿಟ್ಟಿನ ಭರದಲ್ಲಿ ಆ ನೆರೆಯವರ ಇನ್ನುಳಿದ ಬೇಲಿಗೂ ಬೆಂಕಿಯನ್ನು ಹಚ್ಚಿಬಿಟ್ಟರು. ಅದಕ್ಕೆ ಆ ನೆರೆಯವರು—ಇದೆಲ್ಲಾ ಇವಳದೇ ಆಟವೆಂದು ಬಗೆದು ಇವರ ಹೊಲದ ಇಡೀ ಒಡ್ಡನ್ನೆಲ್ಲ ನೆಲಸಮ

ಮಾಡಿಬಿಟ್ಟರು. ಆದರಿಂದ ಆ ಹೊಲದ ಉತ್ಪನ್ನವು ಕಡೆತನಕ ಅರ್ಧ ಕ್ಕಿಂತ ಹೆಚ್ಚು ಭಾಗ ಹಾಳಾದಂತಾಯಿತು. ಆಗ ಮನೆಯಲ್ಲಿ ಲಗ್ಗೆ ಹೂಡಿತು-ನಮ್ಮ ನಾಯಕನಸುತ್ತ. ತಾಯಿಯೂ ಸತಿಯೂ ಕೂಡಿ ಅವನಿಗೆ— 'ನೀನು ಹೀಗೆ ಕಣ್ಣುಮುಚ್ಚಿ ಕುಳಿತರೆ ಮುಂದೆ ನಮ್ಮ ಪಾಡೇನು?' ಎಂದು ಬಲವಾಗಿ ಪೀಡಿಸಹತ್ತಿದರು. ಆಗ ತಾಯಿಗೆ ಹೀಗೆ ಹೇಳಿದನು: 'ಇದರಲ್ಲಿ ಮೊದಲನೆಯ ತಪ್ಪು ನಿನ್ನದೇ ಇದೆ. ಆದುದರಿಂದ ನಾನು ಯಾವ ಮೋರೆಯಿಂದ ಅವರಿಗೆ ಅಪರಾಧ ಹೊರಿಸಲಿ? ನಾನೇನೂ ಈ ಕೆಲಸದಲ್ಲಿ ಕೈಹಾಕಲಾರೆ. ತಾನೇ ಏನಾಗುವದೋ ಆಗಲೊಲ್ಲದೇಕೆ!' ಹೀಗೆಂದು ಈತನೆಂದ ಕೂಡಲೆ ಅವಳು ತನ್ನ ಪಕ್ಷ ವನ್ನು ಸಮರ್ಥಿಸುತ್ತ ಬಲವಾಗಿ ಆಕ್ರೋಶದಿಂದ ಅಳಹತ್ತಿದಳು. ಅದಕ್ಕೇನೂ ಈತನ ಅಭಿಪ್ರಾಯವು ಪಲ್ಲಟಿಸಲೇ ಇಲ್ಲ. ಕೊನೆಗೆ ಅಂದಿನ ರಾತ್ರಿ ರೋಹಿಣಿಯು ಜ್ಞಾನಭಿಕ್ಷುವಿಗೆ ಹೀಗೆಂದಳು— 'ನೀನೊಬ್ಬ ಬೈರಾಗಿ. ಮುಂದೆ ಮಕ್ಕಳು ಮರಿಗಳಿಗೆ ಏನುಮಾಡೆನ್ನುತ್ತೀ?' ಈ ಮಾತಿಗೆ ಆತನಿಗೆ ಬಹಳ ಕೆಡಕೆನಿಸಿತು— 'ಎಲಾ, ಈಸು ವರುಷ ನನ್ನ ಸಹವಾಸದಲ್ಲಿದ್ದುದರ ಫಲವು ಇದೇ ಏನು? ನಿಜವಾದ ತಪ್ಪು ಯಾರದೆಂಬುದನ್ನೂ ಕೂಡ ಲೆಕ್ಕಿಸದೆ ಬಲ್ಲಂತೆ ಬಡಬಡಿಸುವುದಕ್ಕೆ ನಿನ್ನಂಥವಳೂ ಕೂಡ ಸಿದ್ಧಳಾಗಬೇಕೇ?' ಎಂದನು.* ಅದಕ್ಕೂ ಅವಳ ಆಗಿನ ರೋಷಾಂಧ ಬುದ್ಧಿಯು ವಿರೋಧಪರವಾದ ಉತ್ತರವನ್ನೇ ಕೊಟ್ಟದ್ದರಿಂದ ಈತನಿಗೆ ತಾಳ್ಮೆ ತಪ್ಪಿತು. ಅವಳ ಬೆನ್ನಮೇಲೆ ಎರಡು ಬಾಸಳಗಳೆದ್ದವು. ನೋಡಿರಿ— ಅಂತರಂಗದ ಸಾಮರಸ್ಯ ಸೂತ್ರವನ್ನು ಕಂಡವರೆಂದು ಪೂರ್ವರಂಗದ 'ಜೀವನ ಸಾಮರಸ್ಯ' ವೆಂಬ ಪ್ರಕರಣದಲ್ಲಿ

---

* ನೆರೆಹೊಲದವರು ಬಹಳ ವರುಷಗಳಿಂದಲೂ ಆ ಒಡ್ಡನ್ನು ಒಡೆದು, ಅದರಿಂದ ತಮಗಾಗುತ್ತಿದ್ದ ಕೆಲವೊಂದು ವಿಧದ ಹಾನಿಯನ್ನು ತಪ್ಪಿಸಿಕೊಳ್ಳಲೆಳಿಸುತ್ತಿದ್ದು ದೇನೋ ನಿಜವೇ ಆದರೂ ಈಗ ಮೊದಲನೆಯ ತಪ್ಪು ಇವರಿಂದಲೇ ಘಟಿಸಿದ್ದರಿಂದ ಅವರಿಗೊಂದು ಕುಂಟು ನೆವನವು ಸಿಕ್ಕಂತಾಗಿದ್ದಿತು. ಮತ್ತು ಅದಷ್ಟೇ ನಮ್ಮ ನಾಯಕನ ಬಾಯಿಗೆ ಬೀಗ ಹಾಕಲೂ ಸಾಕಾಗಿದ್ದಿತು.

ಓದಿದ ವಾಚಕರು ಇಂದಿನ ಇವರ ಕಥೆಯನ್ನು ಕೇಳಿ ಎಷ್ಟು ನಗಲಿಕ್ಕಿಲ್ಲ? ಕಾಳರಾತ್ರಿಯೆಂದರೇ ಅಂತಹದು!

ಹಾಗೂ ಹೀಗೂ ಈ ಮಾತೇನೋ ಅಷ್ಟಕ್ಕೇ ಉಳಿದುಕೊಂಡು ಬಿಟ್ಟಿತು. ಈ ಕಾಲದಲ್ಲಿ ಜ್ಞಾನಭಿಕ್ಷುವು ವಂಗದೇಶದ ಮಧುರಭಕ್ತಿಯ ಮೂಲಶಾಸ್ತ್ರಗಳಾದ 'ಉಜ್ವಲ ನೀಲಮಣಿ' ಮತ್ತು 'ಭಕ್ತಿರಸಾಮೃತ ಸಿಂಧು' ಎಂಬ ಪ್ರಾಚೀನ ಗ್ರಂಥಗಳ ಅಭ್ಯಾಸದಲ್ಲಿ ತೊಡಗಿದ್ದನು. ಅಷ್ಟರಲ್ಲಿ ಇಷ್ಟೆಲ್ಲಾ ಸಂಗತಿಗಳು ನಡೆದು ಹೋದವು. ಆ ಮೇಲೆ ತುಸು ದಿನಗಳಲ್ಲೇ ಒಬ್ಬ ಗೆಳೆಯನೂರಲ್ಲಿ ಪ್ಲೇಗಿನ ಹಾವಳಿಯೆದ್ದುದರಿಂದ ಅವನು ಅಲ್ಲೇ ಎಲ್ಲಿಯಾದರೂ ಮೂರು ತಿಂಗಳು ಕಾಲ ಕಳೆಯುವ ಬದಲು ಅರವಿಂದರ ಗ್ರಂಥಗಳನ್ನು ಓದಿಸಿ ಕೇಳಬೇಕೆಂಬ ಆಶೆಯಿಂದ ತನ್ನ ಮಡದಿಮಕ್ಕಳನ್ನೆಲ್ಲ ಕಟ್ಟಿಕೊಂಡು ನಮ್ಮ ನಾಯಕನ ಊರಿಗೇ ಬಂದುಬಿಟ್ಟನು. ಆತನು ಒಳ್ಳೇ ಶುದ್ಧಹೃದಯದ ಜಿಜ್ಞಾಸು. ಆದುದರಿಂದ ಅಂಥ ಗೆಳೆಯನೊಂದಿಗೆ ತನ್ನ ಇಚ್ಛಿತ ವಿಷಯದ ಚರ್ಚೆ ವಿವೇಚನೆಗಳಲ್ಲಿ ಹೊತ್ತುಗಳೆಯುವುದು ನಮ್ಮ ನಾಯಕನಿಗೇನು ಒಲ್ಲದ ಕೆಲಸವೆ? ಬಹಳೇ ಒಳ್ಳೆಯದಾಯಿತು. ಎರಡೂವರೆ ತಿಂಗಳುಗಳವರೆಗೆ ಅದೇ ಕೆಲಸವೇ ಕೆಲಸ! ಸದಾ ಅರವಿಂದರ ತತ್ವದ ಮೇಲೆಯೇ ಪಠನ, ಚರ್ಚೆ, ಅನುಶೀಲನ. ಅದರಿಂದ ಜೀವದ ಮೇಲೆ ಜಂಗು ಏರುವುದಕ್ಕೆ ಅವಕಾಶವೇ ಇಲ್ಲದಂತಾಯಿತು. ಆದರೆ ಈ ಎರಡೂವರೆ ತಿಂಗಳ ಕಾಲದಲ್ಲಿಯೇ ಒಳಗೊಳಗೆ ಇನ್ನೊಂದು ಮಹಾದುರ್ಘಟ ಪ್ರಸಂಗವೊಂದು ಬಂದು ಹೋಗದೆ ಬಿಡಲಿಲ್ಲ. ಆದರೆ ಅದರ ಪರಿಣಾಮವು ಮಾತ್ರ ಜ್ಞಾನಭಿಕ್ಷುವಿನ ಮೇಲೆ ವಿಶೇಷವಾಗಿ ಆಗಲಿಲ್ಲ. ಅಂಥ ಆ ವಿಷಮ ಸಂದರ್ಭವಾವುದೆಂದರೆ—

ನಮ್ಮ ನಾಯಕನ ಹಾಗೂ ಆತನ ಸತಿ ಮತ್ತು ಗೆಳೆಯರ ವೈಯ್ಯಕ್ತಿಕ ಆಚರಣೆಯ ಬಗೆಗೆ ಊರೊಳಗಿನ ಬಹು ಜನರಲ್ಲಿ ಒಂದು ಪ್ರಕಾರದ ಸಹಾನುಭೂತಿಯು ತಾನಾಗಿಯೇ ಅಂಕುರಿಸುತ್ತ ಬಂದಿದ್ದಿತು. ಮತ್ತು ಅತಿಶಯದ ಅಗ್ಗಳತೆಯ ಕಾಲದಲ್ಲಿ ಇವರ ದೊಡ್ಡ ಸಾಲವು

ಸುಸೂತ್ರವಾಗಿ ಮುಟ್ಟುತ್ತ ಬಂದುದೂ ಅವರಿಗೊಂದು ಆಶ್ಚರ್ಯ ಕರವಾದ ಸಂಗತಿಯಾಗಿ ತೋರುತ್ತಿದ್ದಿತು. ಅಲ್ಲದೆ ಇವರ ಪರಿಪರಿಯ ಆರ್ಥಿಕ ಕಷ್ಟಕ್ಕೆ ಇವರ ಮನೆಯ ಹಿರಿಯಜಮಾನತಿಯ ಅಪಕ್ವ ವಿಚಾ ರಗಳೇ ಕಾರಣವೆಂದು ಅವರಿಗೆ ಮನವರಿಕೆಯಾಗಿದ್ದಿತು. ಆದುದರಿಂದ ಅವರೆಲ್ಲರೂ ಇವಳೊಡನೆ ಪರಿಪರಿಯಿಂದ ಅಸಹಾನುಭೂತಿಯನ್ನು ತೋರಿಸಹತ್ತಿದರು. ಆಗ ಈಕೆ ತನ್ನ ಮಗನಿಗೆ ಹೀಗೆಂದಳು—" ನೀನು ಅವರಿಗೆ ಏನೂ ಹೇಳಬಾರದೇನು ?" ಈ ಮಾತಿಗೆ ಅವನು ಅಂದದ್ದೇ ನೆಂದರೆ—" ನನ್ನ ಹೊತ್ತು ಹಡೆದ ತಾಯಿ ನೀನು. ಇಂಥವಳು ನನ್ನ ಮಾತನ್ನು ಲೆಕ್ಕಿಸದಿರುವಾಗ ಅನ್ಯರ ಮೇಲೆ ನನ್ನ ಮಾತಿನ ಪರಿಣಾಮ ವಾದೀತೆಂಬ ಆತ್ಮವಿಶ್ವಾಸವು ನನಗೆ ಹೇಗೆ ಬರಬೇಕು ? ಆದುದರಿಂದ ನಾನು ಅವರಿಗೆ ಏನೂ ಹೇಳಲಾರೆ. ಆದರೆ ನೀನೇ ಅವರ ದಾರಿಗೆ ಹೋಗದೆ ಸ್ವಸ್ಥವಾಗಿ ಇರು—ಎಂದು ನಿನಗೇ ಹೇಳುತ್ತೇನೆ ನೋಡು." ಹೀಗೆಂದೊಡನೆ ಆಕೆ—" ಇಂಥ ಮಕ್ಕಳು ಮರಿಗಳು ಇದ್ದಾದರೂ ಏನು ಫಲವೋ ಶಿವನೇ ?! ಮಕ್ಕಳಿದ್ದೂ ಪರದೇಶಿ ನಾನು !" ಎಂದು ಪ್ರಲಾಪಿಸಿದಳು. ನಮ್ಮ ನಾಯಕನು ಅವಳ ಇದಿರಿಗೆ ಹಾಗೆ ನಿರಾಶಾ ಜನಕವಾದ ಉತ್ತರವನ್ನು ಕೊಟ್ಟು ಬಂದರೂ ಆತನು ಅಷ್ಟಕ್ಕೇ ಸುಮ್ಮನೆ ಇರಲಿಲ್ಲ. ಜನರಿಗೆ ಭೆಟ್ಟಿಯಾಗಿ—" ಅಪ್ಪಗಳಿರಾ, ಅವಳ ಕಾರ್ಯದಲ್ಲಿ ತೊಂದರೆಯಾಗುವಂತೆ ನೀವೇನೂ ಆತಂಕಪಡಿಸಬೇಡಿರಿ. ನನ್ನ ತಾಪವನ್ನು ತಪ್ಪಿಸುವುದಕ್ಕೆ ದೇವರು ಸಮರ್ಥನಿದ್ದಾನೆ. ನೀವೇನೂ ಕಳವಳಿಸುವ ಆಗತ್ಯವಿಲ್ಲ. ಅವಳಿಗೆ ತಾನಾಗಿಯೇ ಬುದ್ಧಿ ಬರಲೆಂದು ನಾನು ಹಾರೈಸುವೆನು." ಎಂದು ತಿಳಿಹೇಳಲು ಎಲ್ಲಾ ಅಲ್ಲಿಯದಲ್ಲೇ ಮಟ್ಟಮಾಯವಾಗಿ ಹೋಯಿತು.

ಇತ್ತ ಈ ಬಿರುಗಾಳಿಯೆಲ್ಲಾ ಶಾಂತವಾಯಿತು. ನಮ್ಮ ನಾಯಕ ಮತ್ತು ಆತನ ಗೆಳೆಯ ಇವರಿಬ್ಬರ ತತ್ತ್ವವ್ಯಾಸಂಗಕ್ಕೀಗ ಹೆಚ್ಚಿನ ಭರ. ಆರವಿಂದರ ಪೂರ್ಣಯೋಗದ ಮೇಲಿನ ಮುಖ್ಯವಾದ ಎರಡು ಚಿಕ್ಕ ಗ್ರಂಥಗಳನ್ನು ('ಯೋಗದ ಗೊತ್ತುಗುರಿ' ಮತ್ತು 'ಯೌಗಿಕ ಸಾಧನ')

ಗೆಳೆಯರ ವೈಯ್ಯಕ್ತಿಕ ಉಪಯೋಗಕ್ಕಾಗಿ ಕನ್ನಡಿಸಿದ್ದಾಯಿತು. ನಮ್ಮ ನಾಯಕನ ಅತಿ ಕಷ್ಟದ ತಿಂಗಳುಗಳ ಕಾಲದಲ್ಲೆಲ್ಲಾ ಹತ್ತಿರದಲ್ಲಿದ್ದು ತತ್ತ್ವಚರ್ಚೆಯ ಕಡೆಗೆ ಆತನ ಚಿತ್ತವನ್ನೆಳೆಯುವುದಕ್ಕೆಂದು ದೇವ ದೇವನೇ ಆ ಗೆಳೆಯನನ್ನು ಇತ್ತ ಬೇಕೆಂತಲೇ ಕಳುಹಿಸಿದ್ದನೋ ಏನೋ ಎನ್ನುವಂತೆ—ಇದೀಗ ಪುಸ್ತಕಗಳನ್ನು ಬರೆದು ಮುಗಿಯುವುದಕ್ಕೂ, ಹೊರಗಿನ ವಾತಾವರಣವೆಲ್ಲ ಸರಿಪಡುವದಕ್ಕೂ, ಅತ್ತ ಆ ಗೆಳೆಯ ನೂರೊಳಗಿನ ಪ್ಲೇಗು ಸಂಪೂರ್ಣವಾಗಿ ನಿಂತು ಹೋಗುವದಕ್ಕೂ ಏಕ ಕಾಲದಲ್ಲಿ ತಾಳು ಮೇಳು ಕೂಡಿ ಬಿಟ್ಟಿತು! ಸಾಧಕಜೀವಿಗಳು ಇಂಥ ಪ್ರಸಂಗದಲ್ಲಿ ಅರವಿಂದರ ಈ ಮುಂದಿನ ಸಂದೇಶವನ್ನು ನೆನಪಿನಲ್ಲಿಡ ಬೇಕಲ್ಲವೆ?

"ಏನೇನು ಒಳ ಹೊರಗೆ ಆಗಿ ಹೋಗುವದೊ ಅದೆಲ್ಲವೂ ಸಾಧನ ವೆಂದು ತಿಳಿದು ತಾತ್ಪೂರ್ತಿಕವಾದ ಒಪ್ಪಿಗೆಯನ್ನು ಕೊಡಬೇಕು. ಶುಭವಾದರೆ ಉಲ್ಲಾಸಬೇಡ; ಅಶುಭವಾದರೆ ಉದ್ವಿಗ್ನತೆಬೇಡ. ಅಶುಭ ಹೋಗಿ ಶುಭ ಬರಲೆಂದು ಹೃದಯದಲ್ಲಿ ಚಡಪಡಿಕೆ ಬೇಡ. ಕೊನೆಯ ಪರಿಣಾಮಕ್ಕೆ ಲಕ್ಷ್ಯಕೊಟ್ಟು, ಸ್ಥಿರವಾದ ಸಮ್ಮತಿಯನ್ನಿತ್ತು ಮಾತ್ರ ನೀನಿರಬೇಕು. ತಾತ್ಪೂರ್ತಿಕ ಸಮ್ಮತಿಯೆಂದರೆ ನಡೆದ ವಿಧಿವಿಧಾನಗಳಿಗೆ ನಿವೃತ್ತಿಪರವಾದ ಆಧೀನತೆ; ಫಲಿತಾಂಶವನ್ನು ನಿಜವಾಗಿ ಸ್ವೀಕರಿಸುವು ದೆಂದಲ್ಲ. ಸ್ಥಿರವಾದ ಸಮ್ಮತಿಯೆಂದರೆ ಫಲಿತಾಂಶದ ಅಪೇಕ್ಷಾಗರ್ಭಿತ ವಾದ ಸ್ವೀಕಾರ; ಒಂದು ಬಗೆಯ ಅಪ್ರಯತ್ನವಾದ, ನಿಷ್ಕಾಮವಾದ ಸಂಕಲ್ಪ ಸಾಧನೆ."

---

೮

ಇದೀಗ ಡಿಸೆಂಬರ್ ತಿಂಗಳ ಆರಂಭ. ಈ ವರುಷದ ಡಿಸೆಂಬರು ಅದರಲ್ಲೇ ಬಹಳ ಮಹತ್ವದ್ದು. ಯಾಕೆಂದರೆ ಈ ಸಾರೆಯ ಅಂತರ್ನಿರ್ದೇಶದ ಮೇಲೆಯೇ ನಮ್ಮ ನಾಯಕನ ಮುಂದಿನ ಜೀವನದ ಕಟ್ಟಡವೆಲ್ಲಾ ನಿಲ್ಲಬೇಕಾಗಿದೆ. ಇದೀಗ ಜ್ಯೋತಿಷ್ಯಕ್ಕೂ ಹಿಂದಿನ ತನ್ನ ವಾರ್ಷಿಕ ಅಂತರ್ನಿರ್ದೇಶಗಳಿಗೂ ಏನು ಸಂಬಂಧವಿದೆಯೋ ನೋಡೋಣವೆಂದು ಹಿಂದಿನ ಆಯಾ ವರುಷಗಳ ಗ್ರಹಸ್ಥಿತಿಯನ್ನೆಲ್ಲಾ ತಾಳುಮೇಳು ಮಾಡಿ ನೋಡಹತ್ತಿದನು. ನಮ್ಮ ನಾಯಕನ ಜನ್ಮಕಾಲದಲ್ಲಿ ಹರ್ಷಲ್ಲನೆಂಬ ಗ್ರಹವು ಯಾವ ರಾಶಿಯ ಯಾವ ಅಂಶದಲ್ಲಿದ್ದಿತೋ ಆ ಸ್ಥಳದಲ್ಲಿ ಮುಂದೆ ಎಂದೆಂದು ಬುಧನು ಬಂದಿದ್ದಾನೆಯೋ ಅಂದಂದಿನ ಸುಮಾರಿಗೆ ಈತನಿಗೆ ಅಂತರ್ನಿರ್ದೇಶ ಬಂದಿರುವುದಾಗಿ ಕಂಡುಬಂತು. ಕೇವಲ ಆ ವಿಶಿಷ್ಟ ಸ್ಥಿತಿಯುಂಟಾದ ತಾರೀಖಿಗೇ ಹಾಗಾಗದೆ ಸ್ವಲ್ಪ ಹಿಂದೆ ಅಥವಾ ಸ್ವಲ್ಪ ಮುಂದೆ ಹೆಚ್ಚುಕಡಿಮೆಯಾಗುವುದಕ್ಕೆ ದೈನಿಕ ಚಂದ್ರನು ಕಾರಣನಾಗುತ್ತಿರುತ್ತಾನೆ. ಆದುದರಿಂದ ನಿಶ್ಚಿತ ತಾರೀಖು ಮತ್ತು ಘಟನೆ ನಡೆಯಬೇಕಾದ ನಿಶ್ಚಿತ ತಾಸು ಮುಂತಾದುವುಗಳನ್ನು ಗೊತ್ತುಪಡಿಸುವುದು ಬಿಗಿಯಾದ ಕೆಲಸವಾಗಿದೆಯಾದರೂ ಸಾಧಾರಣವಾಗಿ ಸಮಸಮೀಪದ ಕಾಲವನ್ನು ಗೊತ್ತುಪಡಿಸುವುದು ಎಷ್ಟೋ ಸಾಧ್ಯವಾದ ಮಾತೆಂದು ತೋರಿತು. ಈ ವರುಷ ಡಿಸೆಂಬರ್ ಇಪ್ಪತ್ತೇಳನೇ ತಾರೀಖಿಗೆ ಬುಧನು ಆ ವಿಶಿಷ್ಟ ಸ್ಥಿತಿಯಲ್ಲಿ (ಜನ್ಮಕಾಲದ ಹರ್ಷಲ್ಲನ ರಾಶ್ಯಂಶದಲ್ಲಿ) ಬರುವನೆಂದು ಗಣಿತದಿಂದ ಗೊತ್ತಾಯಿತು, ಹಾಗಾದರೆ

ಆ ತಾರೀಖಿನಕಿಂತ ತುಸು ಮೊದಲು ಅಥವಾ ತುಸು ಹಿಂದೆ ಈ ವರುಷದ ಅಂತರ್ನಿರ್ದೇಶ ಬರುವುದೆಂದು ಲೆಕ್ಕಮಾಡಿಕೊಂಡನು. ಇಲ್ಲಿ ವಾಚಕರು ಹೀಗೊಂದು ಸಂದೇಹವನ್ನು ತೋರಿಸಬಹುದು: ಅದೇನೆಂದರೆ—ಜ್ಯೋತಿಷ್ಯವಿದ್ಯೆಯಲ್ಲಿ ಇಷ್ಟೊಂದು ನುರಿತ ನಿಮ್ಮ ನಾಯಕನು 'ತನ್ನ ಕಾಳರಾತ್ರಿಯು ಕೊನೆಗಾಲವು ಎಂದು?' ಎಂಬುದನ್ನರಿಯದೆ ಇಷ್ಟೊಂದು ಗೋಳಾಡಿದುದು ಹೇಗೆ? ಇದಕ್ಕೆ ಒಂದು ಉತ್ತರವೇನೆಂದರೆ—ಹಿಂದೆ ಯಾರಿಗಾದರೂ ಕೆಲವರಿಗೆ ಕಾಳರಾತ್ರಿಯು ಬಂದದ್ದು ಎಂದು ಹೋಯಿತೆಂಬುದೂ ಮತ್ತು ಅದಕ್ಕೆ ಗ್ರಹಸ್ಥಿತಿಯು ತಾಳು-ಮೇಳು ಹೇಗೆ ಇದ್ದಿತೆಂಬುದೂ ಗೊತ್ತಾಗಿದ್ದರೆ ಅದರಂತೆ ಮುಂದೆ ಭವಿಷ್ಯವನ್ನು ವರ್ತಿಸಲಿಕ್ಕೆ ಸುಲಭವಾಗುತ್ತದೆ. ಇಲ್ಲದಿದ್ದರೆ ಬರೇ ಊಹಿಸುವುದು ಮತ್ತು ಆ ಅನುಮಾನವು ಸರಿಬೀಳುವುದೋ ಇಲ್ಲವೋ ಎಂದು ಹಾಗೇ ಪರೀಕ್ಷಿಸುತ್ತ ನಡೆಯುವುದು ಇದೇ ಒಂದು ದೊಡ್ಡ ಕೆಲಸವಾಗಿ ಬಿಡುತ್ತದೆ. ಹಿಂದಿನ ಅಧ್ಯಾತ್ಮಿಗಳ ಜೀವನಚರಿತ್ರೆಗಳಲ್ಲಿ ನಿಶ್ಚಿತ ಕಾಲನಿರ್ಣಯವು ಸಿಗುವುದೇ ದುರ್ಲಭ. ಮೇಲಾಗಿ ಅಂಥವರ ಶುದ್ಧವಾದ ಜನ್ಮಟಿಪ್ಪಣೆಯು ಸಿಗುವುದು ಅದಕ್ಕಿಂತ ದುರ್ಲಭ. ಇಷ್ಟಕ್ಕೂ ಏಾರಿ ಇಂದು ಜ್ಯೋತಿಷ್ಯವು ಇನ್ನೂ ಸಂಶೋಧಿಸಲ್ಪಡುತ್ತಿರುವ ಅಸಂಪೂರ್ಣ ವಿಷಯ ಬೇರೆ. ಆದುದರಿಂದ ಭವಿಷ್ಯವನ್ನು ವರ್ತಿಸುವುದು—ಅದರಲ್ಲಿಯೂ ಅತ್ಯಂತ ದುರ್ವಿರ್ಕಳವಾದ ಅಧ್ಯಾತ್ಮಿಕ ಜೀವನದ ಭವಿಷ್ಯವನ್ನು ವರ್ತಿಸುವುದು—ಬಹಳ ಬಿಗಿಯಾದ ಕೆಲಸವಾಗಿದೆ. ಮೇಲಾಗಿ ನಮ್ಮ ನಾಯಕನಿಗೀಗ ಐದಾರು ವರುಷಗಳಿಂದ ಆವರಿಸಿಕೊಂಡಿರುವ ಅಶಕ್ತತೆಯು ಮೂಲಕ ತಲೆಯೆಂಬುದು ನೆಲ ಹಿಡಿದ ಹಳೆಯೆತ್ತಿನ ಹಾಗೆ. ಆದುದರಿಂದ ಅದಕ್ಕೆ ಚದುರಂಗದ ಆಟದಂತೆ ಜಟಿಲವಾಗಿರುವ ಈ ಜ್ಯೋತಿರ್ಗಣನೆಯು (calculation) ಬಹಳೇ ಜಡಹರಿಯುತ್ತಿರುವುದು ಸಹಜ. ಹೀಗಾಗಿ ಬುದ್ಧಿಗೆ ಹೆಚ್ಚು ದುಡಿತ ಬೀಳದೆ ಹಗುರಾಗಿ ಅದರೊಡನೆ ಎಷ್ಟು ಮನರಂಜನೆ ಮಾಡಿಕೊಳ್ಳಲಿಕ್ಕೆ ಶಕ್ಯವಿದೆಯೋ ಅಷ್ಟುಮಟ್ಟಿಗೆ ಮಾತ್ರ ಆತನು ಅದರ ಬಾಲವನ್ನು

ವಿಶ್ರಾಂತಿ ತೆಗೆದುಕೋ. ನಾವು ಈ ಮಗುಗಳೊಡನೆ ಹೇಗಾದರೂ ಗುದ್ದಾಡುತ್ತೇವೆ.''

ಅವನಿಗೂ ಅಷ್ಟೇ ಬೇಕಾಗಿದ್ದಿತು. ಆದರೆ-'ಇಂಥಾ ಪರಿಸ್ಥಿತಿಯಲ್ಲಿ ಇವರನ್ನು ನೂಕಿ ನಾನೊಬ್ಬನೇ ಎಲ್ಲಿಗಾದರೂ ಹೇಗೆ ಹೋಗಲಿ!? ಇವರೊಡನೆ ನಾನೂ ಒಬ್ಬನು ಜೊತೆಯಾಗಿದ್ದರೆ ಇವರು ಪಡುವ ಕಷ್ಟದಲ್ಲಿ ಒಂದಿಷ್ಟಾದರೂ ಹಗುರಾಗಬಹುದಲ್ಲವೆ?' ಎಂದುಕೊಂಡಿದ್ದನು. ಆದರೆ ಈಗ ಈತನಿಗಾಗುವ ಅವ್ಯವಸ್ಥೆಯೊಂದು ಅವರ ಉಮ್ಮಳಕ್ಕೆ ಕಾರಣವಾಗುತ್ತಿದೆಯೆಂದರಿತೊಡನೆ ಅಂತೂ ಇಲ್ಲಿಯಿಂದ ಬೇರೆ ಕಡೆಗೆ ಕೆಲದಿನಗಳ ಮಟ್ಟಿಗೆ ತಳವನ್ನು ಕಿತ್ತುವುದಕ್ಕೆ ಮನಸ್ಸು ಮಾಡಿದನು. ಇಂದು ರಾತ್ರಿ ಹೀಗೆ ನಿಶ್ಚಯಿಸಿದನು; ಮರುದಿನ ಬೆಳಗೆಂಬುವಷ್ಟರಲ್ಲಿ ಒಬ್ಬ ಗೆಳೆಯನಿಂದ ಒಂದು ಪತ್ರ ಬಂದೇಬಿಟ್ಟಿತು. ಆ ಪತ್ರದಲ್ಲಿ— "ನಾನೀಗ ತುಂಬಾ ಬಿಡುವಿನಲ್ಲಿದ್ದೇನೆ. ಇಂಥ ಕಾಲದಲ್ಲಿ ನಾನೂ ನೀನೂ ಕೂಡಿ ಕೆಲವು ದಿನಗಳವರೆಗೆ ಒತ್ತಟ್ಟಿಗಿರುವುದರ ಅಗತ್ಯವು ಬಹಳವಾಗಿ ಇದೆ. ಆದುದರಿಂದ ನೀನು ಕೂಡಲೆ ಹೊರಟು ಬರಬೇಕು'' ಆಯಿತು. ಈತನು ಬಯಸಿದ್ದೂ ಅದೇ. ಆದುದರಿಂದ ಮುಂದೆ ಒಂದೆರಡು ದಿನಗಳಲ್ಲಿಯೇ ನಮ್ಮ ನಾಯಕನು ತನ್ನ ಆ ಗೆಳೆಯನಿರುವ ನೆರೆಯ ಪಟ್ಟಣಕ್ಕೆ ಪಯಣ ಬೆಳಿಸಿದನು. ಆದರೆ ಇವನು ಅಲ್ಲಿಗೆ ಹೋದ ದಿನವೇ ಆ ಗೆಳೆಯನಿಗೆ ಬೇರೆ ಕಡೆಯಿಂದೊಂದು ಬಹಳೇ ಅಗತ್ಯದ ತಾರು ಬಂದದ್ದರಿಂದ ಹದಿನೈದು ದಿನಗಳ ಮಟ್ಟಿಗೆ ಅವನು ಅಲ್ಲಿಂದ ತಳಕಿತ್ತಬೇಕಾಗಿ ಬಂದಿತು! ಆಗ ಇಬ್ಬರೂ ಬಹಳವಾಗಿ ಹೊಟ್ಟೆಹಿಡಿಸದಷ್ಟು ನಕ್ಕರು! 'ಕಾಲವು ಏನೇನು ಚಮತ್ಕಾರ ಮಾಡುವುದೆಂಬುದನ್ನು ಕಲ್ಪಿಸಲಳವಲ್ಲ!' ಎಂದು ಇಬ್ಬರು ಅಚ್ಚರಿಬಟ್ಟರು. ಆ ಗೆಳೆಯನಿಗೆ ಹಾಗೆ ಅಕಲ್ಪಿತ ಪ್ರಸಂಗವು ಬಂದಿರದಿದ್ದರೆ— ಹಿಂದೊಮ್ಮೆ ಹೇಳಿದ ಬಗೀಚೆಯೊಳಗಿನ ಬಂಗಲೆಯಲ್ಲಿ ಇಬ್ಬರೂ ಕೂಡಿ ಸುಖವಾಗಿ ಕಾಲವನ್ನು ಕಳೆಯಬಹುದಾಗಿದ್ದಿತು. ಆದರೆ ಕಾಲನಿಗೆ ಅದು ಬೇಡವೆಂದೆನಿಸಿತು. ಆಯಿತು, ಆ ಗೆಳೆಯನು ಅತ್ತ ಬೇರೂರಿಗೆ ಪಯಣಬೆಳೆಯಿಸಿದನು, ಇತ್ತ ಇವನು

ಆದೇ ಪಟ್ಟಣದೊಳಗಿನ ಮತ್ತೊಬ್ಬ ಗೆಳೆಯನ ಮನೆಗೆ ಹೋದನು. ಈ ಬೇರೊಬ್ಬನೂ ನಮ್ಮ ನಾಯಕನ ಜೀವದ ಗೆಳೆಯನೇ. ಆದರೆ ಆತ ನಿರುವುದು ಜನಜಂಜಾಲವುಳ್ಳ ಬಾಜಾರದ ಒಂದು ಅಂಗಡಿಯಲ್ಲಿ. ಅಲ್ಲಿ ಆತನೊಬ್ಬ ಮುಖ್ಯವ್ಯಕ್ತಿ. ಸ್ಥಳವು ನಿವಾಂತವಲ್ಲವೆಂಬುದಿಷ್ಟೇ ನಾನಿಲ್ಲಿ ಹೇಳಬೇಕಾದುದು. ಎಲ್ಲಿದ್ದರೂ ಇವರೆಲ್ಲ ಗೆಳೆಯರು ದಿನಾಲು ಎಡತಾಕು ವವರೇ.

ನಮ್ಮ ನಾಯಕನು ಅಶಕ್ತನಷ್ಟೇ? ಅಲ್ಲಿ ಮೇಲಟ್ಟದ ಮೇಲೆ ಆವನ ವಸತಿ. ಅಲ್ಲೇ ಹಿಮ್ಮಗ್ಗಲಿನ ನಳದಲ್ಲಿ ಸ್ನಾನ. ಗೆಳೆಯನು ದಿನಾಲು ಊಟದ ಸಾಹಿತ್ಯವನ್ನು ಮನೆಯಿಂದ ಇಲ್ಲಿಗೇ ತರಿಸಿಕೊಡು ವನು. ದಿನಾಲು ಸಂಜೆಗೆ ನಮ್ಮ ನಾಯಕನ ಮೈಯ್ಯ ನರಗಳನ್ನೆಲ್ಲಾ ಹಿಚುಕಿ ಸರಿಯಾಗಿ ರಕ್ತಸಂಚಾರಕ್ಕೆ ಮಾರ್ಗಮಾಡಿಕೊಡಬೇಕು. ಊರಲ್ಲಿದ್ದಾಗ ಅದು ರೋಹಿಣಿ ಮಂಜುಳರ ನಿತ್ಯದ ಕೆಲಸ. ಇಲ್ಲಿ ಈ ಗೆಳೆಯನೇ ಇದೆಲ್ಲ ಮಾಡುವನು.

ಆ ಪಟ್ಟಣದಲ್ಲಿ ಕೆಲವು ತರುಣ ವಿದ್ಯಾರ್ಥಿಗಳದೊಂದು ಸಾಹಿತ್ಯ ಸಂಘವು ಹೊಸದಾಗಿ ಸ್ಥಾಪಿಸಲ್ಪಟ್ಟಿದ್ದಿತು. ಅದರ ಕಾರ್ಯಕರ್ತರು ಜ್ಞಾನಭಿಕ್ಷುವಿನ ಹೆಸರನ್ನು ಮೊದಲೇ ಕೇಳಿದ್ದರು. ಈತನು ಬಂದಿದ್ದಾ ನೆಂದು ಗೊತ್ತಾಗಲು ಅವರು ಈತನೊಡನೆ ಪ್ರೇಮವನ್ನು ಬೆಳೆಯಿಸಿ ಕೊಳ್ಳುವುದಕ್ಕೆಂದು ಬರುತ್ತಾ ಹೋಗುತ್ತಾ ಇದ್ದರು. ಅವರು ಒಳ್ಳೇ ಶುದ್ಧ ಹೃದಯದ ಜೀವಿಗಳು. ನಮ್ಮ ನಾಯಕನೂ ಅಂಥವನೇ. ಅಂದ ಮೇಲೆ ಮನಸು ಕಲೆಯುವದು ಏನು ತಡ? ಆಗಿನ ಅತಿ ದಾರುಣ ದಿನಗಳಲ್ಲಿ ಜ್ಞಾನಭಿಕ್ಷುವಿಗೆ ಆ ಸ್ನೇಹಿತರ ಒಡನಾಟದಿಂದ ಹೊತ್ತು ನೂಕುವದು ಬಹಳೇ ಹಗುರಾಯಿತು! ಈತನ ಮನರಂಜನಕ್ಕೆ ಬೇಕು ಬೇಕಾದ ಪುಸ್ತಕಗಳನ್ನೆಲ್ಲ ಅವರು ಭಗೀರಥಪ್ರಯತ್ನದಿಂದಲಾದರೂ ದೊರಕಿಸಿ ತಂದು ಒದಗಿಸುವರು. ಅವರಿಂದಾದ ಆಗಿನ ಸಹಾಯವನ್ನು ನಮ್ಮ ನಾಯಕನು ಎಂದೂ ಮರೆಯಲಾರನು. ನಮ್ಮ ನಾಯಕನಿಗೆ ಅತ್ಯಂತ ಪ್ರೀತಿಯ ಅನುಭಾವ ಕವಿಗಳಾದ "ವಿ. ಈ." ಯವರ ವಿಷಯ

ದಲ್ಲಿ ಅವರು ಲಾಯ್‌ಬ್ರರಿಗಳಲ್ಲಿರುವ ಎಷ್ಟೆಷ್ಟೋ ದೊಡ್ಡ ದೊಡ್ಡ ಹೆಬ್ಬೊತ್ತಿಗೆಗಳನ್ನೆಲ್ಲ ಕಿತ್ತಿಹಾಕಿ ಹೊಸ ಹೊಸ ಸಂಗತಿಗಳನ್ನು ಒದಗಿಸಿ ಕೊಟ್ಟರು. ಈ ರೀತಿಯಿಂದ ಆತನ ಚಿತ್ತಕ್ಕೆ ಎಷ್ಟೋ ಪರಿಯಿಂದ ರಂಜನೆಗೆ ಅವಕಾಶ ಸಿಕ್ಕಿತು. ಹೀಗಿರುವಷ್ಟರಲ್ಲಿ ಒಂದು ದಿನ ಆವರೊಳಗಿ ಸವನೊಬ್ಬ ಸ್ನೇಹಿತನು ಒಂದು ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು ಬಂದು– "ಅಧ್ಯಾತ್ಮದ ಆಶೆಯಿಂದ ನಾನು ಈ ಪುಸ್ತಕವನ್ನು ತರಿಸಿದ್ದೇನೆ. ಆದರೆ ನಮ್ಮ ಪರೀಕ್ಷೆ ಮುಗಿಯುವವರೆಗೆ ಇದರ ಕಡೆಗೆ ಹೊರಳಿ ನೋಡುವುದಕ್ಕೆ ನನಗೆ ಅವಕಾಶವಿಲ್ಲ. ಆದುದರಿಂದ ನಿನಗೆ ಬೇಕಾಗಿದ್ದರೆ ಅದುವರೆಗೆ ಕೆಲವು ತಿಂಗಳು ನಿನ್ನಲ್ಲೇ ಇದ್ದರೆ ಅಡ್ಡಿಯಿಲ್ಲ" ಎಂದು ಹೇಳಿದನು. ನಮ್ಮ ನಾಯಕನು ಬಹುದಿನಗಳಿಂದ ಅದರ ಹೆಸರು ಕೇಳಿದ್ದರೂ ಇದುವರೆಗೂ ಕೈಗೆ ಬೀಳದೆ ಇದ್ದ ಪುಸ್ತಕವು ಅದು! ಇಲ್ಲಿ ಒಂದು ಚಮತ್ಕಾರವೇನೆಂದರೆ— ನಿನ್ನೆ ಸಂತರಲೆ ರಾತ್ರಿಯಲ್ಲಿ ಆತನ ತಲೆಯಲ್ಲಿ ಹೀಗೊಂದು ವಿಚಾರವು ಬಂದಿದ್ದಿತು: ಅದೇನೆಂದರೆ— "ನನಗೆ ಮಹತ್ವದ ಪುಸ್ತಕಗಳು ಕೆಲವು ಕೈಗೆ ಬಿದ್ದಾಗಳೆಲ್ಲಾ ಗ್ರಹಸ್ಥಿತಿಯು ಯಾವ ಪ್ರಕಾರದ್ದಾಗಿದ್ದಿತೋ ನಾಳಿನ ದಿನ ಹಾಗೆಯೇ ಇರುವದರಿಂದ ನಾಳೆ ಯಾವ ಪುಸ್ತಕವು ಹೇಗೆ ಕೈಗೆ ಬೀಳುವದೋ ನೋಡಬೇಕು" ಆಯಿತು. ಬೆಳಗಾಗುವಷ್ಟರಲ್ಲಿ ಆ ಅನುಮಾನವು ನಿಜವಾಯಿತು!

ಅದನ್ನು ತೆರೆದು ನೋಡುತ್ತಾನೆ! ಅದು ಮಹಾ ಅದ್ಭುತ ರಮ್ಯವಾದ ಅನುಭಾವ ಗ್ರಂಥ! ಅದರೊಳಗಿನ ಒಂದೊಂದು ಮಾತೂ ಸಾಧಕರಿಗೆ ರೋಮಾಂಚನವನ್ನುಂಟು ಮಾಡುವಂತಹವು! ಆಗ ನಮ್ಮ ನಾಯಕನು ಹೀಗೆ ಅನ್ನುತ್ತಾನೆ: "ಆಹಾ! ಈ ವರುಷದ ಅಂತರ್ನಿರ್ದೇಶಕ್ಕೆ ಇದೇ ಗ್ರಂಥವೇ ಕಾರಣವಾಗಬಹುದೇನು?! ಇದು ಕೈಗೆ ಬಂದ ಪರಿಯು ಎಷ್ಟು ವಿಚಿತ್ರ!!!"

ಹೀಗೆಂದು ಅವನು ಅತಿಶಯವಾಗಿ ಸೋಜಿಗಗೊಂಡನು!

---

೬

ಇದೀಗ ನಮ್ಮ ನಾಯಕನ ಅಂತರಂಗವು ಎರಡು ಭಾವನೆಗಳಿಂದ ತುಂಬಿಕೊಂಡಿದೆ. ಅವುಗಳಲ್ಲಿ ಒಂದು—ಧನ್ಯತೆ, ಮತ್ತೊಂದು—ಭವಿತವ್ಯದ ಚಿಂತೆ. "ದೇಹವೆಷ್ಟೋ ಕ್ಷೀಣವಾಗಿರಲಿ, ಬಡತನವೆಷ್ಟೋ ಬೆನ್ನುಹತ್ತಿರಲಿ, ಇನ್ನುಳಿದ ಉಪದ್ರವಗಳೆಷ್ಟೋ ಬಾಧಿಸುತ್ತಿರಲಿ, ಏನಿದ್ದರೂ ಸರಿ. ಆದರೆ ಅಧ್ಯಾತ್ಮದ ಸತ್ಯತೆಯ ವಿಷಯದಲ್ಲಿ ತುಂಬಾ ನಿಶ್ಚಿತಮತಿಯೊಂದುಂಟಾಗಿದೆ ಸಾಕು. ದೇಹವನ್ನು ಎಷ್ಟೋ ಸವೆಯಿಸುವೆನೆಂದರೂ ಅದು ಬಾರದು. ಧನವನ್ನೆಷ್ಟೋ ವ್ಯಯಿಸುವೆನೆಂದರೂ ಅದು ಲಭಿಸದು. ತಾಪತಡಿಗಳನ್ನೆಷ್ಟೋ ತಾಳುವೆನೆಂದರೂ ಅದು ಸಿಕ್ಕದು. ಹೊರಮುಗ್ಗಲಿನಿಂದ ನೋಡಿದರೆ ಸ್ಥಿತಿಯು ಎಷ್ಟೋ ನಿಕೃಷ್ಟ ದಶೆಗೆ ಬಂದಿದ್ದರೂ ಅಡ್ಡಿಯಿಲ್ಲ; ಒಳಮುಗ್ಗಲಿನಿಂದ ಆದ ಕಲ್ಯಾಣವು ಅಷ್ಟಿಷ್ಟಲ್ಲ! ಇದರ ಮುಂದೆ ಆ ಕೇಡು ಕಃಪದಾರ್ಥ!" ಹೀಗೊಂದು ಬಗೆಯ ಧನ್ಯತೆಯೊಂದು ಕಡೆ, ಬೇರೊಂದು ಒಗೆಯ ತೀಕ್ಷ್ಣ ಆಲೋಚನೆಯೊಂದು ಕಡೆ—'ಈ ಡಿಸೆಂಬರಿನ ಅಂತರ್ನಿರ್ದೇಶವು ನನ್ನ ಜೀವದೊಳಗಿನ ದೌರ್ಬಲ್ಯವನ್ನೆಲ್ಲ ಹೊಡೆದುಹಾಕಬೇಕು. ತಾಳಲಾರೆನೆಂದು ಗೋಳಿಡುವ ಜೀವವು ಅಷ್ಟಿಷ್ಟರಿಂದ ಇನ್ನು ಸಮಾಧಾನವನ್ನು ಹೊಂದದು. ಕಾಳರಾತ್ರಿಯನ್ನೆಲ್ಲ ಹೊಡೆದೋಡಿಸುವ ಮಹಾ

ಪ್ರಕಾಶವೀಗ ಪ್ರಕಟವಾಗಲೇಬೇಕು. ಇಲ್ಲದಿದ್ದರೆ ಜರ್ಜರಿತವಾದ ನನ್ನ ಜೀವವಿನ್ನು ಕಾಲೂರಿ ನಿಲ್ಲುವುದು ಕಷ್ಟ. ಅದರ ಸಹನಶೀಲತೆಯು ಹ್ರಾಸವು ಪರಮಾವಧಿಗೆ ಮುಟ್ಟಿರುವುದರಿಂದ ಒಂದು ರವೆಯಷ್ಟೇ ಕಷ್ಟವೀಗ ಅದಕ್ಕೆ ಗುಡ್ಡದಷ್ಟು ಭಾರವಾಗುತ್ತಿದೆ. 'ಕಷ್ಟ'ವೆಂಬ ಕಲ್ಪನೆ ಕನಸುಮನಸಿನಲ್ಲಿ ಸುಳಿದರೆ ಸಾಕು—ಅದು ಹೌಹಾರಿ ಹೋಗುತ್ತಿದೆ!"

ಅದರಲ್ಲಿಯೂ ಡಿಸೆಂಬರ್ ಸಮೀಪಿಸಿದ ಹಾಗೆಲ್ಲಾ ಆತನ ಕಾಳ-ರಾತ್ರಿಯು ಬೆಂಕಿಗೆ ಗಾಳಿ ನೆರವಾದಂತಾಗುತ್ತದೆ. ಅಂತರಾಳದಲ್ಲೆಲ್ಲಾ ಒಂದು ಅವರ್ಣನೀಯವಾದ ದಿಗ್ಭ್ರಮೆ. ಅಲ್ಲದೆ ಮೊದಲೇ ಲಿಕಿಲಿಕಿಯಾಗಿರುವ ಜೀವಕ್ಕೆ ಇರುಳಿನ ಭಯಂಕರ ಸ್ವಪ್ನಗಳ ಉಪಟಳ ಬೇರೆ! ಜೊತೆಗೆ ಮಲಗಿದ ಗೆಳೆಯರು ಎಚ್ಚತ್ತು ಗಾಬರಿಯಾಗಬೇಕು! ಸ್ವಪ್ನದಲ್ಲಿ ಭಯಪಟ್ಟು ಗಟ್ಟಿದನಿಯಿಂದ ನಮ್ಮ ನಾಯಕನು ರೋದಿಸುತ್ತಿರುವುದನ್ನು ನೋಡಿದರೆ ಬದಿಯಲ್ಲಿರುವವರಿಗೆ ಕನಿಕರವುಂಟಾಗದಿರದು. ಕನಸಿನಲ್ಲಿ ಈತನನ್ನು ಅತ್ಯುಗ್ರ ಹಿಂಸೆಯಿಂದ ಕೊಲ್ಲುವುದಕ್ಕೆ ಏನಾದರೊಂದು ಅಘಟಿತ ಘಟನೆ ನಡೆದ ಹಾಗೆ ಆಗುವುದು. ಅದರಿಂದ ಆತನು ಅತಿಶಯವಾಗಿ ಹೆದರಿ ಚೀರುವನು. ಹಸಿದ ಹುಲಿಯು ಮೈಮೇಲೆ ಹಾರಿಬಂದರೆ ಹರಿಣಶಿಶುವೊಂದು ಎಷ್ಟು ಎದೆಗೆಡಬೇಕೋ ಅಷ್ಟು ನಮ್ಮ ನಾಯಕನ ಪರಿಯಾಗುತ್ತಿದ್ದಿತು. ಮುಂದೆ ಎಚ್ಚತ್ತಮೇಲೆ ಕೂಡ ತಾಸರ್ಧತಾಸಿನ ವರೆಗೆ ಎದೆಯು ಒಂದೇ ಸವನೆ ಬಡಿದು ಕೊಳ್ಳುತ್ತಾ ಇರುವುದು. ಹೀಗೆ ಈ ಕಾಲದಲ್ಲಿ ಜ್ಞಾನಭಿಕ್ಷುವಿನ ಮೇಲೆ ಒಳಗೂ ಹೊರಗೂ ಕೂಡಿಯೇ ಹಾವಳಿಯು ಹೆಚ್ಚುತ್ತಿರುವುದರಿಂದ ಅವನು ಬಹಳೇ ಹಣ್ಣುಗಾಯಿ–ನೀರುಗಾಯಿ ಆಗಿಹೋಗುತ್ತಿರುವನು. ಆದುದರಿಂದ ಚಿತ್ತವು ಹಗಲಿರುಳು ಒಂದೇಸವನೆ 'ಹಾ ಭಗವಾನ್! ಹಾ ತಂದೇ!' ಎಂದು ಗೋಳಿಡುತ್ತಿರುವುದು. ಈ ಆರ್ತ ಪ್ರಾರ್ಥನೆಯು ಬದಿಯಲ್ಲಿದ್ದವರ ಕಿವಿಗೆ ಕೀಸರಿಟ್ಟು ಬೇಸರಾಗುವಹಾಗೆ ಸತತವಾಗಿ ನಡೆಯುತ್ತಿರುವುದು. ಪ್ರತಿವರುಷವೂ ಈ ತಿಂಗಳೆಂದರೆ

ನಮ್ಮ ನಾಯಕನ ಪಾಲಿಗೆ ಅದೊಂದು ಪ್ರಸವವೇದನೆಯ ಕಾಲವಿದ್ದ ಹಾಗೆ !!!

ಇಷ್ಟೆಲ್ಲಾ ನಾನು ಹೇಳುತ್ತಿರುವಾಗ ನಮ್ಮ ವಾಚಕರ ಚಿತ್ತವು ಬೇರೊಂದು ವಿಷಯದ ಕಡೆಗೇ ಹಾತೊರೆಯುತ್ತಿರಬಹುದು. ಅದೇನೆಂದರೆ 'ಈ ವರುಷದ ಅಂತರ್ನಿರ್ದೇಶಕ್ಕೆ ಕಾರಣವಾಗಬಹುದೋ ಏನೊ' ಎಂದು ಹಿಂದಿನ ಪ್ರಕರಣದ ಕೊನೆಯಲ್ಲಿ ಜ್ಞಾನಭಿಕ್ಷುವು ಊಹಿಸಿಕೊಂಡಿರುವ ಆ ಪುಸ್ತಕವು ಯಾವದು? ಮತ್ತು ಅದರ ಕಥೆ ಏನೇನು?

ಈ ಮೊದಲೇ ನಾನು ಅದರ ಹೆಸರನ್ನು ಹೇಳಬೇಕಾಗಿದ್ದಿತು. ಆದರೆ ನಾನು ಬೇಕೆಂತಲೇ ಹಾಗೆ ಮಾಡಲಿಲ್ಲ. ಯಾಕೆಂದು ಕೇಳುತ್ತೀರಾ? ಹಾಗಾದರೆ ಹೇಳುವೆನು ಕೇಳಿರಿ. ನಾನೇನೋ ಅದನ್ನು ಮಹಾ ಅನುಭಾವಗ್ರಂಥವೆಂದು ಹೇಳಿದೆನು. ಆದರೆ ಎಷ್ಟೋ ಜನ ಗ್ರ್ಯಾಜ್ಯುಯೇಟರು ಅದೊಂದು ಸಾಮಾನ್ಯವಾದ ನೀತಿಬೋಧಕ ಕಥೆಯೆಂದು ಭಾವಿಸಿರುವುದಾಗಿ ನನಗೆ ತಿಳಿದುಬಂದಿದೆ. ಆದುದರಿಂದ ಅದರ ವಿಷಯದಲ್ಲಿ ಒಂದಿಷ್ಟು ಸ್ಪಷ್ಟವಾಗಿ ಪ್ರಸ್ತಾವನೆಯನ್ನು ಹೇಳದೆ ಅದರ ಹೆಸರನ್ನು ಒಮ್ಮೆಲೆ ಹೊರಗೆಡವಿಬಿಟ್ಟಿದ್ದರೆ 'ಅಯ್ಯೋ ಅದೇನು ಅಂಥಾ ಮಹಾ ಗ್ರಂಥ?!' ಎಂದು ನೀವು ಅದರ ವಿಷಯದಲ್ಲಿ ಕೂಡಲೆ ಕುತೂಹಲರಹಿತರಾಗಬಹುದಾಗಿದ್ದಿತು.

ರತ್ನಾಕರಸಿದ್ಧನು ತನ್ನ ಭರತೇಶವೈಭವದ ವಿಷಯಕ್ಕೆ ಹೇಳಿದ ಹಾಗೆಯೇ ಈ ಗ್ರಂಥದ ಕರ್ತೃವೂ—ಕೇವಲ ಹಾಗೆಯೇ—ಹೇಳಿದ್ದಾನೆ.

"ಬೇಕಾದರಾಲಿಸುವುದು ಬೇಡವಾಗೆ ಪ-
ರಾಕು ಮಾಡುವುದೆನಗಲ್ಲಿ ॥
ವ್ಯಾಕುಲವಿಲ್ಲ ಸಂತಸವಿಲ್ಲ ನಾನು ನಿ-
ರಾಕಾಂಕ್ಷಿ................"

"If that thou will not read,
let it alone;
Some love the meat, some love
to pick the bone."

ಅನುಭಾವದ ಮರ್ಮವನ್ನರಿಯದೆ ನಾವು ಒಮ್ಮೊಮ್ಮೆ ಇಂಥ ಗ್ರಂಥಗಳ ವಿಷಯಕ್ಕೆ ಕಂಡಾಪಟ್ಟೆ ಮಾತಾಡಿಬಿಡುತ್ತಿರುವೆವು. ಆದರೆ ಹಾಗೆ ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವಾಗ ಒಂದು ಮಾತನ್ನು ನಮ್ಮ ಆತ್ಮಕ್ಕೆ ಕೇಳದೆ ಬಿಡಬಾರದು; ಅದೇನೆಂದರೆ—"ಆ ವಿಷಯದಲ್ಲಿ ನಮಗೆ ಸಾಕಷ್ಟು ತಿಳುವಳಿಕೆಯಿದೆಯೇ ?"

ಹೀಗೆ ಜಾಗರೂಕತೆಯನ್ನು ವಹಿಸಿದರೆ ನಮ್ಮಿಂದ ಪ್ರಮಾದಗಳಾಗುವ ಸಂಭವವು ಬಹಳ ಕಡಿಮೆ. ಅದಿರಲಿ. ಆ ಗ್ರಂಥದ ಹೆಸರನ್ನು ಹೇಳುವೆ—ಅದು "ಪಿಲ್ಗ್ರಿಮ್ಸ್ ಪ್ರೊಗ್ರೆಸ್" (Pilgrim's progress--ಯಾತ್ರಿಕನ ಕ್ರಮಗತಿ). ಅದನ್ನು ಬರೆದ ಮಹಾ ಅನುಭಾವಿಯು ಹದಿನೇಳನೇ ಶತಮಾನದಲ್ಲಿ ಜೀವಿಸಿದ್ದ ಜಾನ್ ಬನಿಯನ್ನನು.

ಗ್ರಂಥಕಾರನು ಅದೊಂದು ಸ್ವಪ್ನಕಥೆಯೆಂದು ವರ್ಣಿಸಿದ್ದಾನೆ. ಆದರೆ ಅದು ಆತನದೇ ಅಂತರಂಗಿಕ ಜೀವನದ ಆತ್ಮಕಥೆಯಾಗಿದೆ.

ಆ ಕಥೆಯ ನಾಯಕನು ಮೊದಲಿಗೆ ತನ್ನ ಬೆನ್ನ ಮೇಲಿನ ಪಾಪದ ಹೊರೆಯನ್ನು ಲಕ್ಷಿಸಿ ಗಾಬರಿಗೊಂಡು 'ಮುಂದೇನು ಗತಿ ? ತಾರಣೋಪಾಯವೇನು ?' ಎಂದು ಕಾತರಿಸುತ್ತಿರಲು ಆತನ ಕೈಯೊಳಗಿನ ದಿವ್ಯ ಗ್ರಂಥವೊಂದರಲ್ಲಿ 'ಇಕ್ಕಟ್ಟಾದ ಬಾಗಿಲಿನಿಂದ ಹೋಗು' ಎಂದು ಬರೆದಿರುವುದು ಕಣ್ಣಿಗೆ ಬೀಳುತ್ತದೆ. ಅದರಂತೆ ಅವನು ಹೊರಟಾಗ ಆವನ ಮಡದಿಮಕ್ಕಳೆಲ್ಲ ಸುತ್ತುಗಟ್ಟಿ ಅವನನ್ನು ತಡೆಯಲೆಳಸಿ ಹಲುಬುತ್ತಾರೆ. ಆದರೂ ಅವನು ಕಿವಿಯಲ್ಲಿ ಬೆರಳಿಟ್ಟುಕೊಂಡು—'ಜೀವನ ! ಜೀವನ !! ಶಾಶ್ವತ ಜೀವನ !!!' ಎಂದು ಕೂಗಿಕೊಳ್ಳುತ್ತ ಹಾಗೇ ಓಡಿ ಹೋಗಿಬಿಟ್ಟನು. ಅವನು ಹಿಂದಕ್ಕೆ ಹೊರಳಿ ನೋಡಲೇ ಇಲ್ಲ. ("......But the man put his fingers in his ears, and ran on, crying, Life! life!! eternal life!!! So the looked not behind him") ಎಂಬ ವಾಕ್ಯವನ್ನೋದಿದೊಡನೆಯೇ ಜ್ಞಾನಭಿಕ್ಷುವಿನ ಹೃದಯದಲ್ಲಿ–ಹಿಂದೊಂದು ವರುಷ ನಿರ್ದೇಶವಾಕ್ಯವಾಗಿ ಬಂದ ಗೀತಾ ಶ್ಲೋಕವು ತಟ್ಟನೆ ನೆನಪಿಗೆ ಬಂದಿತು. "....ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ !"

ಆದರ ಕಾರಣವೇನೆಂದರೆ–ಜ್ಞಾನಭಿಕ್ಷುವಿಗೆ ತನ್ನ ಸತಿಯ ವಿಷಯದಲ್ಲಿ ಅಗಾಧವಾದ ಪ್ರೇಮದೊಡನೆ ಅಪಾರವಾದ ಕರುಣೆಯೊಂದು ಬಲವಾಗಿ ಪೀಡಿಸುತ್ತಿದ್ದಿತು. 'ಪ್ರೇಮವು ಸಾನ್ನಿಧ್ಯವನ್ನು ಆಶಿಸುವಂತೆ ದೂರೀಕರಣವನ್ನೂ ಸಹಿಸಬೇಕು' ಎಂಬುದು ಅವನಿಗೀಗ ತಿಳಿದ ಮಾತಾಗಿದೆಯಾದರೂ ಆತನ ಸಲ್ಲೆಗಿನ್ನೂ ಆ ಅವಸ್ಥೆ ಬಂದಿರಲಿಲ್ಲ. ಅಲ್ಲದೆ ಅವಳು ಕರಾಳ ಪರಿಸ್ಥಿತಿಯಲ್ಲಿ ನಿಂತ ಅಧೀರ ಅಸಹಾಯಳು ಬೇರೆ. ಆದುದರಿಂದ ನಮ್ಮ ನಾಯಕನು ಅವಳನ್ನು ಬಿಟ್ಟು ಅರಗಳಿಗೆಯೂ ಅಗಲುವುದಕ್ಕೆ ಸಮ್ಮತಿಸುತ್ತಿರಲಿಲ್ಲ. ಅವಳು ತನ್ನ ಕಾಲ ಮೇಲೆ ತಾನು ನಿಂತು, "ಬೇಕಾದ ಸಂಕಟ ಬಂದರೂ ನಿಸ್ತರಿಸಿಕೊಳ್ಳಬಲ್ಲೆ"ನೆಂಬಷ್ಟು ಧೀರಳಾದರೆ ತಾನು ಅವಳನ್ನು ಬಿಟ್ಟು ತನ್ನ ಅಧ್ಯಾತ್ಮಕ್ಕೆ ಅನುಕೂಲವಾಗುವಂತೆ ಬೇಕಾದಲ್ಲಿಗೆ ಹೋಗಿ ಇರಬಹುದೆಂದು ಆತನ ಎಣಿಕೆ. ಮಂಜುಳನು ಇಷ್ಟರವಟ್ಟಿಗೆ ಸ್ವತಂತ್ರನಾಗಿರುವುದರಿಂದ ಆತನ ಚಿಂತೆಯೇನೂ ಇಲ್ಲ. ಆದರೆ ರೋಹಿಣಿಯದೆ ಒಂದು ತೊಡಕು.

ತನ್ನ ಈ ದೌರ್ಬಲ್ಯವನ್ನೇ ದೇವದೇವನು ಪುನಃ ಪುನಃ ಕಣ್ಣೆದಿರಿಗೆ ತಂದು ತೋರಿಸುತ್ತಿದ್ದಾನಲ್ಲ! ಎಂದು ಆತನಿಗೆ ಅತ್ಯಾಶ್ಚರ್ಯವಾಗುತ್ತಲಿದೆ. "Life, life eternal life" "ಜೀವನ! ಜೀವನ!! ನಿತ್ಯಜೀವನ!!!" ಎಂಬ ಆ ವಾಕ್ಯವು ಜ್ಞಾನಭಿಕ್ಷುವಿನ ಅಂತಃಕರಣದಲ್ಲಿ ಅದೊಂದು ಬಗೆಯ ಕೋಲಾಹಲವನ್ನೇ ಎಬ್ಬಿಸಿತು. ಆದರೂ ಇದು ಈ ವರುಷದ ಅಂತರ್ನಿರ್ದೇಶವಲ್ಲ. ಅಂತರ್ನಿರ್ದೇಶ ಬಂತೆಂದರೆ ಜೀವದೊಳಗಿನ ಬಿರುಗಾಳಿಯೆಲ್ಲಾ ಶಾಂತವಾಗಿ ಮುಂದೇನು ಮಾಡಬೇಕೆಂಬುದು ನಿಚ್ಚಳವಾಗಿ ಗೊತ್ತಾಗಿಬಿಡುವುದು. ಆದರೆ ಈಗ ಆದದ್ದು ಆಶ್ಚರ್ಯವು ಮಾತ್ರ. ಅಂದರೆ ಇದೇ ಪುಸ್ತಕವೇ ಈ ವರುಷದ ಅಂತರ್ನಿರ್ದೇಶವನ್ನು ಜಾಗ್ರತಪಡಿಸುವ ಸಾಧನವಾಗುವದೆಂಬ ಭರವಸವು ಮಾತ್ರ ಹೆಚ್ಚು ಸ್ಪಷ್ಟವಾಗಿ ಪ್ರಕಟವಾಯಿತು.

———

## ೧೦

"**ಯಾತ್ರಿಕನ ಪಯಣಗತಿ**"ಯನ್ನಿಷ್ಟು ನೋಡಿ ಹರ್ಷಗೊಳ್ಳುವಾ, ಬನ್ನಿರಿ—

"ಯಾತ್ರಿಕನು ಮಡದಿ ಮಕ್ಕಳ ಮಾತಿಗೆ ಕಿವಿಗೊಡದೆ 'ನಿತ್ಯ ಜೀವನ! ನಿತ್ಯ ಜೀವನ!' ಎಂದು ಕೂಗಿಕೊಳ್ಳುತ್ತ ಓಡಿಹೋದನಷ್ಟೆ? ಮುಂದೆ ಅವನಿಗೆ 'ಅಧೈರ್ಯದ ಹುದಿಲು' (Slough of despondency) ಎಂಬ ಕೊಳಚಿ ಪ್ರದೇಶವೊಂದು ಹತ್ತುತ್ತದೆ. ಆತನು ಕಾಲುಜಾರಿ ಅದರಲ್ಲಿ ಬಿದ್ದು ಒದ್ದಾಡುತ್ತಾನೆ. ಆಗ ಹಿಂದಿರುಗುವುದಕ್ಕೂ ಆಗದು, ಮುಂದರಿಯುವುದಕ್ಕೂ ಆಗದು. ಇಂಥ ಪೇಚಾಟದಲ್ಲಿ ಸಿಟ್ಟುಸಿರು ಬಿಡುತ್ತಿರುವಾಗ ಒಬ್ಬ ಸಹಾಯಕನು ಕೈಗೊಟ್ಟು ಆಚೆಯ ದಡಕ್ಕೆ ಮುಟ್ಟಿಸಿ—"ಈ ಹಾದಿಯನ್ನು ಸರಿಪಡಿಸುವ ಯತ್ನಗಳು ಸಾವಿರಾರು ವರುಷಗಳಿಂದ ನಡೆದೇ ಇವೆಯಾದರೂ ಅದು ಇನ್ನೂ ಹಾಗೇ ಇದೆ. ಕೊಳಚಿಯಲ್ಲಿ ಒಳಗೆ ಗಟ್ಟಿನೆಲದ ಹಾದಿಯಿದೆಯಾದರೂ ಇಲ್ಲಿ ಯಾತ್ರಿಕರಿಗೆ ತಮ್ಮ ಪಾಪರಾಶಿಯ ನೆನಪಾಗುವುದರಿಂದ ಅವರು ಎದೆಗೆಟ್ಟು ಹೋಗುತ್ತಾರೆ. ಆದುದರಿಂದ ಅವರಿಲ್ಲಿ ತತ್ತರಿಸಿ ಬಿದ್ದುಬಿಡುತ್ತಾರೆ. ಎಂದು ಆ ಸ್ಥಳದ ವೃತ್ತಾಂತವನ್ನು ವಿವರಿಸಿ ಆತನನ್ನು ಮುಂದಕ್ಕೆ ಕಳುಹಿಸುತ್ತಾನೆ.

"ಬಳಿಕ ಆತನು ಇಕ್ಕಟ್ಟಾದ ಬಾಗಿಲಿಗೆ ಬರುತ್ತಾನೆ. ಅದರ ಮೇಲ್ಭಾಗದಲ್ಲಿ—'ತಟ್ಟಿದವನಿಗೆ ತೆರೆಯುತ್ತದೆ' ಎಂಬ ಮಹಾವಾಕ್ಯವು ಕೆತ್ತಲ್ಪಟ್ಟಿದ್ದಿತು. ಈತನು ಅದನ್ನೋದಿ ಅತಿ ವಿನಯದಿಂದ ಒಳಗಿದ್ದವರಿಗೆ ಬಿನ್ನವಿಸಿ ಆ ಬಾಗಿಲನ್ನು ತಟ್ಟಿದನು. ಆಗ ದ್ವಾರಪಾಲಕನು ಕದಾ ತೆರೆದು ಆತನನ್ನು ಅವಸರದಿಂದ ಒಳಗೆ ಎಳೆದುಕೊಂಡನು. ಅದಕ್ಕೆ ಅವನು ತೋರಿಸಿದ ಕಾರಣವು ಯಾವುದೆಂದರೆ—'ಹೊರಗಡೆಗೆ ಒಂದು ಭದ್ರವಾದ ಕೋಟೆಯಿದೆ. ಅದರಲ್ಲಿದ್ದ ಕೆಡುಕನ ಆಳುಗಳು ಈ ಬಾಗಿಲಿಗೆ ಬರುವವರ ಮೇಲೆ ಅಂಬುಗಳನ್ನೆಸೆಯುತ್ತಿರುತ್ತಾರೆ. ಆದುದರಿಂದ ನಾನು ನಿನ್ನನ್ನು ಅವಸರದಿಂದ ಜಗ್ಗಿಕೊಂಡೆನು.'

"ಆಮೇಲೆ ಆ ದ್ವಾರಪಾಲಕನು—'ಅಯ್ಯಾ, ಇಲ್ಲೇ ಬಳಿಯಲ್ಲಿ ನಮ್ಮ ಯಜಮಾನನ ಬಿಡಾರವಿದೆ. ನೀನು ಅಲ್ಲಿಗೆ ಹೋಗಿ ಅಲ್ಲಿ ನೋಡಿಕೊಳ್ಳತಕ್ಕದ್ದನ್ನೆಲ್ಲ ನೋಡಿಕೊಂಡು ಮುಂದಿನ ಹಾದಿಯ ಹೊಲಬನ್ನೆಲ್ಲ ಕೇಳಿಕೊಳ್ಳಬೇಕು.' ಅವನ ಹೇಳಿಕೆಯ ಮೇರೆಗೆ ಯಾತ್ರಿಕನು ಆ ಮನೆಗೆ ಹೋದನು. ಅದು ಅರ್ಥಗಾರನೆಂಬವನ ಮನೆ (Interpreter's house). ಅಲ್ಲಿಗೆ ಬರುವ ಯಾತ್ರಿಕರಿಗೆಲ್ಲಾ ಆ ಮನೆಯ ಒಡೆಯನಾದ ಅರ್ಥಗಾರನು ಅರ್ಥವಾಗದ ಬಗೆಬಗೆಯ ದೃಶ್ಯಗಳನ್ನು ತೋರಿಸಿ ಅವುಗಳ ಅರ್ಥವನ್ನು ಹೇಳಿಕೊಡುತ್ತಿದ್ದನು. ಅಂಥವುಗಳಲ್ಲೊಂದನ್ನು ನಾನಿಲ್ಲಿ ಹೇಳುವೆನು. ಅರ್ಥಗಾರನು ಈ ಯಾತ್ರಿಕನನ್ನು ಒಂದು ಕೋಣೆಗೆ ಕರೆದುಕೊಂಡು ಹೋಗಿ ಅಲ್ಲಿಯ ಒಂದು ದೃಶ್ಯವನ್ನು ತೋರಿಸಿದನು. ಅಲ್ಲಿ ಶೋಭಾಯಮಾನವಾದ ಜ್ವಾಲೆಯೊಂದು ಧಗಧಗಿಸುತ್ತಲಿದ್ದು ಅದರ ಬಳಿಯಲ್ಲಿ ನಿಂತ ಕುರೂಪಿಯೊಬ್ಬನು ಅದನ್ನಾರಿಸುವುದಕ್ಕೆ ಅದರಲ್ಲಿ ಎಡೆಬಿಡದೆ ನೀರು ಸುರುವುತ್ತಿದ್ದನು. ಆದರೂ ಅದು ಆರದೆ ಇತ್ತು. ಅದನ್ನು ಕಂಡು ಯಾತ್ರಿಕರಿಗೆ ಬಹಳೇ ಆಶ್ಚರ್ಯವಾಯಿತು. ಆ ಬಳಿಕ ಅದರ ಹಿಂದಿನ ಕೋಣೆಗೆ ಕರೆದೊಯ್ದು ಆ ಮನೆಯೊಡೆಯನು ಮತ್ತೊಂದು ವಿಚಿತ್ರವನ್ನು ತೋರಿಸಿದನು. ಅಲ್ಲಿ ಒಬ್ಬ ಭವ್ಯಕಾಂತಿಯುಳ್ಳ ಮಹಾ ಪುರುಷನು ಕೈಯ್ಯಲ್ಲೊಂದು ತೈಲ

ಪೂರಿತ ಅಕ್ಷಯ್ಯಪಾತ್ರೆಯನ್ನು ಹಿಡಿದುಕೊಂಡು ಮರೆಯಲ್ಲಿ ನಿಂತು ಹೊರಗಿನ ಕೋಣೆಯಲ್ಲಿ ಉರಿಯುತ್ತಿದ್ದ ಮಹಾಜ್ವಾಲೆಯಲ್ಲಿ ಅದನ್ನು ಒಂದೇಸವನೆ ಹನಿಸುತ್ತಿದ್ದನು. ಆದರಿಂದಲೇ ಅದು ನಂದಲಾರದೆ ಇತ್ತು. ಅರ್ಥಗಾರನು ಯಾತ್ರಿಕರಿಗೆ ಇದರ ಅರ್ಥವನ್ನು ಹೇಳಿದ್ದು ಹೇಗೆಂದರೆ— 'ಅಲ್ಲಿ ಉರಿಯುತ್ತಿದ್ದುದು ಭಕ್ತಿಯಬೆಂಕಿ; ಅದನ್ನಾರಿಸುತ್ತಿದ್ದವನು ಸೈತಾನ; ಇಲ್ಲಿ ಅದರಲ್ಲಿ ಎಣ್ಣೆ ಹೊಯ್ಯುತ್ತಿರುವವನು ಮಹಾಪ್ರಭು; ಎಣ್ಣೆಯೆಂಬುದು ಆತನ ದಿವ್ಯಾನುಗ್ರಹವೇ. ಮರೆಯಲ್ಲಿರುವುದು ಆತನ ಲೀಲೆ (ವಾಡಿಕೆ).

"ಇಂಥ ಇನ್ನೂ ಎಷ್ಟೋ ದೃಶ್ಯಗಳನ್ನು ತೋರಿಸಿ ಕೊನೆಗೆ ಅವನು ಮುಂದಿನ ಹಾದಿಯಲ್ಲಿ ಹತ್ತುವ ಎಡರು ತೊಡರುಗಳಲ್ಲೆಲ್ಲ ಧೈರ್ಯವನ್ನು ಹಿಡಿಯೆಂದು ಹೇಳಿ ಕಳಿಸಿಕೊಟ್ಟನು.

"ಆಗ ಯಾತ್ರಿಕನು ಮುಂದೆ ಹೊರಟನು. ದಾರಿಯ ಎರಡೂ ಮಗ್ಗಲಿಗೆ ಸುರಕ್ಷಿತದ ಗೋಡೆಗಳಿದ್ದವು. ಮೊದಲು ಹೊರಟಾಗ ತನ್ನ ಬೆನ್ನಮೇಲಿದ್ದ ಭಾರವಾದ ಮೊಟ್ಟೆಯು ಇನ್ನೂ ಹಾಗೇ ಇದ್ದೇ ಇತ್ತು. ಅದನ್ನು ಹೊತ್ತುಕೊಂಡು ಮುನ್ನೋಡಿ ಹಾದೀ ನಡೆಯುವಷ್ಟರಲ್ಲಿ ಒಂದು ಸೂಲಗಂಬವು ಕಣ್ಣಿಗೆ ಬಿತ್ತು. ಅದು ಪುರಾತನ ಕಾಲದ ಮಹಾಶರಣನ ಗಲ್ಲಿನ ಕಂಬವಾಗಿದ್ದಿತು. ಅದನ್ನು ನೋಡಿದಾಗಳೇ ಯಾತ್ರಿಕನು— 'ಲೋಕದ ಸಲುವಾಗಿ ಪ್ರಾಣವನ್ನು ಹುಲ್ಲುಕಡ್ಡಿಗಿಂತ ಕೀಳಾಗಿ ಎಣಿಸಿದವನಿಗೆ ಜಯವಾಗಲಿ!' ಎಂದು ಉದ್ಗಾರ ತೆಗೆದನು. ಕೂಡಲೆ ಬೆನ್ನಮೇಲಿನ ಮೊಟ್ಟೆಯು ಕಳಚಿ ಆ ಕಂಬದ ಬದಿಯಲ್ಲಿದ್ದ ಗುಂಡಿಯೊಳಗೆ ಉರುಳಾಡುತ್ತ ಹೋಗಿ ಬಿದ್ದುಬಿಟ್ಟಿತು. ಕೂಡಲೆ ಮೂರು ಮಂದಿ ದೇವದೂತರು ಬಂದು ಇವನನ್ನು ಮನ್ನಿಸಿದರು. ಒಬ್ಬನು ಈತನ ಮಾಸಿದ ಬಟ್ಟೆಗಳನ್ನೆಲ್ಲ ತೆಗೆಯಿಸಿ ಹೊಸ ಉಡಿಗೆ ತೊಡಿಗೆಗಳನ್ನು ಕೊಟ್ಟನು. ಇನ್ನೊಬ್ಬನು ಹಣೆಗೆ ತಿಲಕವನ್ನಿಟ್ಟನು. ಮತ್ತೊಬ್ಬನು ಮುಂದಿನ ಹಾದಿಯಲ್ಲಿ ಭರವಸವನ್ನು ಹುಟ್ಟಿಸುವ ಕಾಗದದ ಸುರಳಿಯನ್ನು ಕೊಟ್ಟನು.

ಅವರ ಕಡೆಯಿಂದ ಹರಿಸಿಕೊಂಡು ಹೊರಟ ಯಾತ್ರಿಕನು ಮುಂದೆ ಒಂದು ಬಹು ಕಡಿದಾದ ಗುಡ್ಡದ ತಳಕ್ಕೆ ಬಂದು ಸೇರಿದನು. ಅದಕ್ಕೆ ಕಷ್ಟದ ಗುಡ್ಡ (Hill of difficulty) ಎಂದು ಹೆಸರು. ಇನ್ನು ಮುಂದಿನ ಹಾದಿ ಅದರ ಮೇಲೆ ಹಾದು ಹೋಗುವದು. ಅಲ್ಲಿ ಬಳಿಯಲ್ಲಿರುವ ಒಂದು ಬುಗ್ಗೆಯಲ್ಲಿ ನೀರು ಕುಡಿದು ಹೊಸ ಹುರುಪಿನಿಂದ ಗುಡ್ಡವ ನ್ನೇರಹತ್ತಿದನು. ಬಲುಬಲು ಪ್ರಯಾಸದಿಂದ ಏರುತ್ತ ಏರುತ್ತ ಕೊನೆಗೊಂದು ಸಮತಲ ಪ್ರದೇಶಕ್ಕೆ ಮುಟ್ಟಿದನು. ಅದು ದಣುವಾರಿಸಿ ಕೊಳ್ಳುವ ಸ್ಥಳ. ಆದರೆ ಬಳಲಿದ ಯಾತ್ರಿಕರು ಅಲ್ಲಿ ತಮ್ಮ ಮುಂದಿನ ಪ್ರವಾಸವನ್ನು ಮರೆತು ಮಲಗಿಕೊಂಡು ದೀರ್ಘನಿದ್ರೆಯಲ್ಲಿ ಅಲ್ಲೇ ಉಳಿಯುವ ಸಂಭವವು ಹೆಚ್ಚು. ಈ ನಮ್ಮ ಯಾತ್ರಿಕನಿಗೂ ಅಲ್ಲಿ ಅಲ್ಪಸ್ವಲ್ಪ ಪ್ರಮಾದಗಳು ಘಟಿಸದೆ ಬಿಡಲಿಲ್ಲ.

"ಸಾವರಿಸಿಕೊಂಡು ಮುಂದೆ ಹಾಗೇ ಹಾದೀ ಹಿಡಿದನು. ಹೊತ್ತು ಮುಳುಗುವ ಸಮಯ. ಅಲ್ಲೇ ಮುಂದೆ ಸುಂದರವಾದ ಅರಮನೆಯೆಂಬ (Palace beautiful) ವಸತಿಸ್ಥಾನವಿದ್ದಿತು. ಆದರೆ ಅದಕ್ಕಿಂತ ಈಚೆಗೊಂದು ಕೂಗಳತೆಯ ಮೇಲೆ ದಾರಿಯ ಎರಡೂ ಮಗ್ಗಲಿಗೆ ಎರಡು ಸಿಂಹಗಳು ಕುಳಿತು ಗರ್ಜನೆಮಾಡುತ್ತಿದ್ದವು. ಅವುಗಳ ಗುಡುಗಿಗೆ ಈತನು ಬಹಳವಾಗಿ ಹೆದರಿದನು. ಆದರೂ ಹಿಂದಿರುಗಬಾರದೆಂದು ಬಲವಾದ ಆಶೆ. ಈತನ ಆ ಆಶೆ ಪ್ರಕಟ ವಾದೊಡನೆಯೇ ಅರಮನೆಯ ದ್ವಾರಪಾಲಕನ ಕೂಗು ಕೇಳಿಸಿತು— 'ಎಲಾ! ಅವು ಕಟ್ಟಿದ ಸಿಂಹಗಳು. ಕೊರಳೊಳಗಿನ ಸರಪಳಿ ಕಾಣಿಸ ಲಿಲ್ಲವೇನು? ಬಾ, ನೆಟ್ಟಗೆ ಬಾ. ಅವು ನಿನಗೆ ಏನೂ ಅಪಾಯ ಮಾಡ ಲಾರವು!'

"ಯಾತ್ರಿಕನಿಗೆ ಆಗ ಧೈರ್ಯ ಬಂತು. ಆದರೂ ಎದೆ ಬಿರಿಯುವಂಥ ಗರ್ಜನೆಗೆ ನಡುಗುತ್ತಲೇ ಇದ್ದನು. ಅಂತೂ ಇಂತೂ ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಹೇಗಾದರೂ ಪಾರಾಗಿ ಯಾತ್ರಿಕರ ವಿಶ್ರಾಂತಿ ಗೆಂದು ಕಟ್ಟಿಸಿದ ಆ ಸುಂದರವಾದ ಅರಮನೆಗೆ ತಲುಪಿದನು.

"ಆ ರಮಣೀಯವಾದ ವಿಶ್ರಾಮಭವನದ ವ್ಯವಸ್ಥಾಪಿಕೆಯರು ನಾಲ್ವರು ಕುಮಾರಿಕೆಯರು. ಅವರು ಯಾರನ್ನೂ ವರಿಸಿದವರಲ್ಲ. ಯಾತ್ರಿಕರಿಗೆ ಉಪಚಾರ ಮಾಡಿ ಅವರನ್ನು ಆಶೀರ್ವದಿಸಿ ಕಳುಹಿಸುವರು. ಅವರ ಹೆಸರುಗಳ ಮೇಲಿಂದ ಅವರ ಮೇಲ್ಮೆಯನ್ನು ಊಹಿಸಬಹುದು— (೧) ಬುದ್ಧಿವಂತೆ, (೨) ದೇವಭಕ್ತೆ, (೩) ಮುಂಜಾಗ್ರತೆ, (೪) ಔದಾರ್ಯೆ. (Discretion, Piety, Prudence, Charity).

"ಯಾತ್ರಿಕನು ಈ ನಾಲ್ವರು ಕುಮಾರಿಕೆಯರೊಡನೆ ಅತ್ಯಂತ ಪವಿತ್ರಭಾವದ ಸರಸ ಸಲ್ಲಾಪಗಳನ್ನಾಡುತ್ತ ಉಂಡುಟ್ಟು ಅಲ್ಲಿ ಕೆಲ ಕಾಲ ವಿಶ್ರಾಂತಿಯನ್ನು ಹೊಂದಿದನು. ಅಲ್ಲಿ ಒಂದು ಪುರಾತನ ದಿವ್ಯ ವಸ್ತುಗಳ ಹಾಗೂ ಮಹಾಶಾಸನಗಳ ಸಂಗ್ರಹಾಲಯವಿತ್ತು. ಪುರಾತನ ಕಾಲದಲ್ಲಿ ಮಹಾಪ್ರಭುವಿನ ಕಟ್ಟಾಳುಗಳು ನಡಿಸಿದ ಮಹಾ ಅಘಟಿತ ಘಟನೆಗಳನ್ನು ಬಣ್ಣಿಸುವ ವೀರಶಾಸನಗಳನ್ನು ಅಲ್ಲಿ ಆ ಕನ್ನಿಕೆಯರು ಓದಿ ತೋರಿಸಿದರು. ಮತ್ತು ಆ ವೀರರು ತಮ್ಮ ಮಹಾಪ್ರಭುವಿನ ವರದಿಂದ ಸಂಪಾದಿಸಿಕೊಂಡಿದ್ದ ದಿವ್ಯಾಸ್ತ್ರಗಳನ್ನು ತೋರಿಸಿದರು. ಅಲ್ಲದೆ ಮುಂದಿನ ಯಾತ್ರಿಕರಿಗೆ ಸಂತಯಿಸುವುದಕ್ಕಾಗಿ ಅಲ್ಲಿ ಬರೆದು ಇಟ್ಟಿರುವ ಭವಿಷ್ಯ ವಾಕ್ಯಗಳನ್ನು ಓದಿ ತೋರಿಸಿದರು. ಮತ್ತು ಯಾತ್ರಿಕರ ಸಲುವಾಗಿ ಅಲ್ಲಿ ಸಂಗ್ರಹಿಸಿಟ್ಟಿದ್ದ ಆಯುಧಗಳ ಅಕ್ಷಯ್ಯ ನಿಧಿಯನ್ನು ತೋರಿಸಿದರು.

"ಇಷ್ಟೆಲ್ಲಾ ಆದಮೇಲೆ ಮುಂದೊಂದು ದಿನ ಯಾತ್ರಿಕನು ತನ್ನ ಮುಂದಿನ ಪಯಣಕ್ಕೆ ಸಿದ್ಧನಾದನು. ಆದರೆ ಅವರು—'ಅಯ್ಯಾ, ಸ್ವಲ್ಪ ತಡೆ. ಇನ್ನುಮುಂದೆ ನಿನಗೆ ಹಾದಿಯಲ್ಲಿ ಹತ್ತುವ ವಸತಿಸ್ಥಾನವನ್ನು ನಮ್ಮ ಎತ್ತರವಾದ ಮೇಲಟ್ಟದ ತುದಿಯ ಮೇಲೆ ನಿಂತು ತೋರಿಸುವೆವು. ಎಂದು ಹೇಳಿ ಮೇಲಕ್ಕೆ ಕರೆದುಕೊಂಡು ಹೋಗಿ— 'ಅದೋ ನೋಡು, ಅಲ್ಲಿ ಕಾಣಿಸುವವುಗಳೇ ನಿನ್ನ ಮುಂದಿನ ವಸತಿಯ ರಮ್ಯಗಿರಿಗಳು (Delectable mountains). ಅಲ್ಲಿ ವಾಸವಾಗಿರುವ ದೇವನ ಗೋವಳರು ನಿನಗೆ ನಿನ್ನ ಮುಂದಿನ ಪಯಣವನ್ನು ಹೇಳಿಕೊಟ್ಟು

ನೀನು ಸೇರಬೇಕಾಗಿರುವ ಸ್ವರ್ಗನಗರಿಯನ್ನು ತೋರಿಸಿಕೊಡುವರು.' ಎಂದು ಹೇಳಿದರು.

"ಇದಲ್ಲದೆ ಆ ಕುಮಾರಿಕೆಯರು ಅವನನ್ನು ಆಯುಧಶಾಲೆಗೆ ಕರೆದೊಯ್ದು, ಮುಂದಿನ ಮಾರ್ಗದಲ್ಲಿ ಬಹಳವಾಗಿ ಕಾದಾಡಬೇಕಾಗಿರುವುದರಿಂದ ಅಭೇದ್ಯವಾದ ಕವಚವನ್ನು ತೊಡಿಸಿದರು. ಮತ್ತು ದಾರಿಯ ಬುತ್ತಿಯನ್ನು ಕಟ್ಟಿಕೊಟ್ಟರು. ಹಾಗೂ ತಮ್ಮ ಗುಡ್ಡದ ಇಳುಕಲಿನ ಇಳಿಜಾರು ದಾಟುವ ವರೆಗೆ ಅವನ ಜೊತೆಗೆ ಹೋಗಿ **ಆಮೇಲೆ ಅವನನ್ನು ಮುಂದಕ್ಕೆ ಕಳುಹಿಸಿ ತಾವು ಹಿಂದಕ್ಕೆ ಹೊರಳಿದರು.**

"ಇದೀಗ ಯಾತ್ರಿಕನು ದುಮ್ಮಾನದ ದರಿಯಲ್ಲಿ (Valley of humiliation) ಒಂಟಿಗನಾಗಿ ಹೊರಟನು. ಅಷ್ಟರಲ್ಲಿ ಇದಿರಿಗೆ ಒಬ್ಬ ಅಕರಾಳವಿಕರಾಳವಾದ ಕಿಂಭೂತಕಿಮಾಕಾರದ ಸಂಹಾರಕ ಪಿಶಾಚನೊಬ್ಬನು (Destroyer) ಕಾಣಿಸಿಕೊಂಡನು. ಹಿಂದಿರುಗಿ ಓಡಿಹೋಗಬೇಕೆಂದರೆ ಯಾತ್ರಿಕನ ಬೆನ್ನಿನ ಕಡೆಗೆ ಕವಚವಿಲ್ಲ; ಬರೀ ಇದಿರಿನ ಮಗ್ಗುಲಿಗೆ ಮಾತ್ರ. ಹೀಗೆಂದ ಬಳಿಕ ಬೆನ್ನುಕೊಟ್ಟರೆ ನಾಶವು ತಪ್ಪದು ಧೈರ್ಯದಿಂದ ಇದುರಿಸಿದರೇನೇ ಇನ್ನೂ ಬದುಕುವ ಆಶೆ. ಆದುದರಿಂದ ಆತನು ರಾಕ್ಷಸನನ್ನು ಸಂಧಿಸಿಯೇ ಬಿಟ್ಟನು. ಆ ದುಷ್ಟನು—'ಎಲಾ ನಾನು ಈ ನಾಡಿನ ಪ್ರಭುವು. ನನ್ನ ಕಣ್ಣುತಪ್ಪಿಸಿ ಓಡಿಹೋಗಲೆಳಸುವ ನನ್ನ ಪ್ರಜೆಗಳನ್ನು ನಾನು ಬಿಡಲಾರೆನು. ನಿಮ್ಮಂಥವರೆಲ್ಲ ಕೂಡಿ ನನ್ನ ನಾಡನ್ನು ಹಾಳಗೆಡವಬೇಕೆನ್ನುವಿರಿ. ನಾನು ನಿಮ್ಮನ್ನು ಬಿಟ್ಟಪ್ಪನಲ್ಲ. ಕಣ್ಣುತಪ್ಪಿಸಿ ಇಲ್ಲಿಯ ವರೆಗೆ ನೀನು ಬಂದದ್ದೇ ಹೆಚ್ಚಿನಸಮಾತು. ಇಲ್ಲಿಯಿಂದ ಒಂದು ಹೆಜ್ಜೆ ಕೂಡ ನಿನ್ನನ್ನು ಮುಂದಕ್ಕೆ ಬಿಡುವಹಾಗಿಲ್ಲ. ನಿನ್ನಲ್ಲಿ ಸಾಮರ್ಥ್ಯವಿದ್ದರೆ ನೋಡು ಬಾ ಒಂದು ಕೈ!' ಎಂದು ಅಂದನು.

"ಅದಕ್ಕೆ ಯಾತ್ರಿಕನು ಎದೆಗುಂದದೆ ಕಾದಾಟಕ್ಕೇ ಅಣಿಯಾದನು. ಅವನು ಏಸೋ ಸಾರೆ ಸೋತು ಸಾಯುವಂತಾದರೂ, ಕೊನೆಗೆ

ಮದಾಂಧನಾದ ರಾಕ್ಷಸನು ಮೈಮರೆತು ಈತನ ಕತ್ತಿಗೆ ತುತ್ತಾದನು! ಅದಕ್ಕೆ ದೇವದೇವನನ್ನು ಕೊಂಡಾಡಿ ಯಾತ್ರಿಕನು ಮುಂದಕ್ಕೆ ಹಾದೀ ಹಿಡಿದನು.

"ಅಷ್ಟಕ್ಕೇ ತೀರಲಿಲ್ಲ. ಅದರ ಮುಂದೆ ಮತ್ತೊಂದು ತಗ್ಗು ಉಂಟು. ಅದು ಮರಣದ ಛಾಯೆಯ ತಗ್ಗು (Valley of the shadow of Death). ಅದು ತುಂಬಾ ಕಗ್ಗತ್ತಲೆಯುಳ್ಳ ಕಂದಕವು. ಒಂದು ಕಡೆಗೆ ಘನಘೋರವಾದ ಆಳವಾದ ದರಿ. ಇನ್ನೊಂದು ಕಡೆಗೆ ಅಂಟಿದರೆ ಬಿಡಲಾರದ ಆಳವಾದ ಕೆಸರು. **ಆ ಉಭಯ ಪಾರ್ಶ್ವದ ಅಪಾಯಗಳ ಹೊರತು ಮಾರ್ಗದಲ್ಲಿ ಕಂಗೆಡಿಸುವ ಕಾಳ-ರಾತ್ರಿಯ ಕಗ್ಗತ್ತಲೆ ಬೇರೆ ಮುಸುಕಿದ್ದರಿಂದ ಆತನು ನಡೆಯುವಾಗ ಹೆಜ್ಜೆಯನ್ನು ಎಲ್ಲಿಡಬೇಕೆಂದರಿಯದೆ ಅನೇಕ ಸಾರೆ ಗೋಳಾಡಿದನು.** *(......When he lifted up his foot to go forward, he know not where, or upon what, he should set it next).*

"ಆ ತಗ್ಗಿನ ಮಧ್ಯದಲ್ಲಿ ಮಾರ್ಗಕ್ಕೆ ಬಹಳ ಸಮೀಪವಾಗಿ ನರಕದ ಬಾಗಿಲಿತ್ತು. ಅದರೊಳಗಿಂದ ಹೊರಸೂಸುವ ಬೆಂಕಿ, ಹೊಗೆ, ಕಿಡಿಗಳನ್ನೂ ಅಸಹನೀಯವಾದ ಸಪ್ಪಳಗಳನ್ನೂ ನೋಡಿ ಕೇಳಿದಾಗ ಯಾತ್ರಿಕನು ಇನ್ನು ಖಡ್ಗದ ಉಪಯೋಗವಿಲ್ಲೆಂದು ಬಗೆದು ಅದನ್ನು ಒರೆಗಾಣಿಸಿ ಈ ಸರ್ವಪ್ರಾರ್ಥನೆಯೆಂಬ ಮತ್ತೊಂದು ಮಹಾಯುಧವನ್ನು ತೆಗೆದು ಅದರಿಂದ ಅಂತರಂಗದಲ್ಲಿ ದೇವದೇವನನ್ನು ಆರಾಧಿಸಿದನು. ಆದರೂ ಬಹುವಿಧದ ಅಂತರಪಿಶಾಚಗಳು ಅವನನ್ನು ಮುಟ್ಟದಿದ್ದರೂ ಹಾಗೇ ಮೈಮೇಲೆ ರೌದ್ರದಿಂದ ತೂರಿ ತೂರಿ ಬರುತ್ತಲೇ ಇದ್ದವು. ಆಗ—'ನಾನು ಕಾರ್ಗತ್ತಲಿನ ಕಣಿವೆಯಿಂದ ನಡೆಯುತ್ತಿರುವೆನಾದರೂ ನೀನು ನನ್ನ ಹತ್ತರವಿರುವುದರಿಂದ ಕೇಡಿಗೆ ಹೆದರೆನು.' ಎಂದು ಒಬ್ಬ ಭಗವದ್ಭಕ್ತನಾಡಿದ ವಚನವೊಂದು ಕಿವಿಗೆ ಕೇಳಿಸಿತು. ಆ ವಾಣಿಯನ್ನು ಕೇಳಿದ ಕೂಡಲೆ ಯಾತ್ರಿಕನಿಗೆ ಬಹಳ ಹರುಷವಾಯಿತು.

ಯಾಕೆಂದರೆ ತನ್ನ ಹಾಗೆಯೇ ದೇವನನ್ನು ಆಶ್ರಯಿಸಿದವರು ಈ ತಗ್ಗಿನಲ್ಲಿ ನಡೆಯುತ್ತಿದ್ದಾರೆಂದು ತಿಳಿದುಕೊಂಡನು. ಮತ್ತು ಅವರಿಗೆ ಬೆನ್ನಾಸರಾದ ಪ್ರಭುವು ತನಗೂ—ತಾನೀಗ ಅದನ್ನು ಅರಿಯದಿದ್ದರೂ ಕೂಡ—ಸಹಾಯಕನಾಗದಿರಲಾರನೆಂದು ಭರವಸಪಟ್ಟನು. ಸ್ವಲ್ಪ ಹೊತ್ತಾದ ಮೇಲೆ ಬೆಳಗಿನ ಜಾವ ಬರಲು ಆ ಯಾತ್ರಿಯು ಹೀಗೆಂದು ಹರ್ಷೋದ್ಗಾರವನ್ನು ತೆಗೆದನು—'ಆಹಾ! ದೇವದೇವನು ಮರಣದ ಮೊಬ್ಬನ್ನು ಪರಿಹರಿಸಿ ಬೆಳಗಿನ ಜಾವವನ್ನಾಗಿ ಮಾಡಿದನು!' (He hath turned the Shadow of Death into the morning!)

---

# ೧೧

ಯಾತ್ರಿಕನ ಪಯಣವು ಇಲ್ಲಿಗೇ ಮುಗಿಯಿತೆಂದು ಭಾವಿಸಿದಿರೇನು? ಹಾಗೇನೂ ಅಲ್ಲ. ಹಾಗಾದರೆ ಅಷ್ಟಕ್ಕೇ ಪ್ರಕರಣವನ್ನು ಮುಗಿಸಿದ್ದೇಕೆ? ಎಂದು ಕೇಳುತ್ತೀರಾ? ಅದಕ್ಕೆ ಕಾರಣವಿಲ್ಲದೆ ಇಲ್ಲ. ನಮ್ಮ ನಾಯಕನಾದ ಜ್ಞಾನಭಿಕ್ಷುವು ಈಗ ಯಾವ ಅವಸ್ಥೆಗೆ ಬಂದಿರುವನೋ ಅದೇ ಮೆಟ್ಟಲಿಗೆ ಇಲ್ಲಿ ಯಾತ್ರಿಕನೂ ಬಂದು ಮುಟ್ಟಿರುವನು. ಇಬ್ಬರ ಅವಸ್ಥೆಯೂ ಇಲ್ಲಿಗೆ ಕೂಡಿತು. ಇಬ್ಬರ ಮಾರ್ಗದಲ್ಲಿಯೂ ಈಗ ಕಾಳರಾತ್ರಿಯ ಕಾವರ ಹರಿದು ಬೆಳಗಾಯಿತು. ಯಾತ್ರಿಕನ ಪಯಣಗತಿಯಲ್ಲಿ ಬರುವ ಇನ್ನು ಮುಂದಿನ ಭಾಗವು ನಮ್ಮ ನಾಯಕನ ಜೀವನದಲ್ಲಿ—ಈಶ್ವರೇಚ್ಛೆಯಿದ್ದರೆ—ಇನ್ನು ಮೇಲೆ ಬರತಕ್ಕದ್ದುಂಟು. ಆದುದರಿಂದ ಮುಂದಿನ ವಿಷಯವನ್ನು ಬೇರೊಂದು ಪ್ರಕರಣವಾಗಿ ವಿಭಾಗಿಸಿದ್ದು ಸಯುಕ್ತಿಕವಾಗಲಿಲ್ಲವೆ? ಹಾಗಾದರೆ ಇನ್ನು ಮುಂದಿನ ಕಥೆಯನ್ನು ಕೇಳಿರಿ—

"ಮರಣದ ನೆರಳಿನ ತಗ್ಗಿನಲ್ಲಿ ಹೀಗೆ ಬೆಳಗಾದದ್ದರಿಂದ ಯಾತ್ರಿಕನು ಧೈರ್ಯತಾಳಿ, ಹಿಂದೆ ದಾಟಿದ ಮಹಾ ವಿಪತ್ತುಗಳನ್ನೆಲ್ಲ ನೆನೆದು' ದೇವನು ಅವುಗಳೊಳಗಿಂದೆಲ್ಲ ಪಾರುಮಾಡಿದ್ದಕ್ಕೆ ಆತನನ್ನು ಕೊಂಡಾಡಿದನು. **ಇದೀಗ ಬೆಳಗಿನ ಬೆಳಕು ಬಿದ್ದದ್ದರಿಂದ ಆ ಹಿಂದಿನ**

**ಭೂತ ಪ್ರೇತಗಳೆಲ್ಲಾ ತನ್ನನ್ನು ಮುಟ್ಟದೆ ದೂರದಲ್ಲಿ ಸರಿದು ಹೋಗಿ ನಿಂತಿರುವುದನ್ನು ಕಂಡನು.** ಹಿಂದೆ ಕಗ್ಗತ್ತಲಲ್ಲಿ ಒಂಟಿಗನಾಗಿದ್ದಾಗ ತನ್ನನ್ನು ಪೀಡಿಸಿದ ಪಿಶಾಚಿಗಳು ಈಗ ಹೀಗೆ ದೂರ ಸರಿದಿರುವುದನ್ನು ನೋಡಿ ಮತ್ತಷ್ಟು ಸಂತುಷ್ಟನಾದನು. ಇಷ್ಟರಲ್ಲಿ ಮೂಡಣದಿಕ್ಕಿನಲ್ಲಿ ಸೂರ್ಯನೂ ಉದಯಿಸಿದನು! ಅದನ್ನು ಕಂಡು ಆತನಿಗೆ ಇನ್ನೂ ಉಲ್ಲಾಸ ಹೆಚ್ಚಿತು. ಯಾಕೆಂದರೆ ಆ ಮರಣದ ನೆರಳೆಂಬ ತಗ್ಗಿನ **ಹಿಂದಿನ ಭಾಗದಲ್ಲಿ ಉಂಟಾದ ಅಪಾಯಕ್ಕಿಂತ ಹೆಚ್ಚಿನ ಅಪಾಯವು ಇನ್ನು ಮುಂದಿನ ಭಾಗದಲ್ಲಿ ಉಳಿಯಿತು.** ಅವನು ಈಗ ನಿಂತಿರುವ ಸ್ಥಳದಿಂದ ಇನ್ನೂ ಮುಂದೆ ಸರಿಯಾಗಿ ಅರ್ಧ ದಷ್ಟಿರುವ ತಗ್ಗಿನ ತುದಿಯವರೆಗೆಲ್ಲಾ ಹಾದಿಯು ತುಂಬ ಉರಲು, ಬೋನು, ಬಲೆ, ಗುಳಿ, ಬಿಲ, ಇಳಿಜಾರು ಮೊದಲಾದವುಗಳು ಈಚೆ ಆಚೆಯಲ್ಲಿ ತುಂಬಿಕೊಂಡಿರುವುದರಿಂದ **ಮುಂಚಿನ ಹಾಗೆ ಕತ್ತಲೆ ಇದ್ದರೆ ಜೀವದಲ್ಲಿ ಸಾವಿರ ಪ್ರಾಣಗಳ ತ್ರಾಣವಿದ್ದರೂ ಕೂಡ ಯಾತ್ರಿಕನು ಬದುಕದೆ ಇರುತ್ತಿದ್ದನು.** ಆದರೆ ಆಗಲೇ ಮೂಡು ತ್ತಿದ್ದ ಸೂರ್ಯನನ್ನು ಕಂಡು ಅವನು ಹೀಗೆ ಉದ್ಗಾರವನ್ನು ತೆಗೆದನು– **'ದೇವರ ದೀಪವು ತಲೆಯಮೇಲೆ ಥಳಥಳಿಸುತ್ತಲಿದೆ; ಆತನ ಬೆಳಕಿನಿಂದ ಕತ್ತಲಲ್ಲೂ ನಾನು ಸಂಚರಿಸಬಲ್ಲೆನು!'.**

ಇಲ್ಲಿ ಒಂದು ಸೋಜಿಗದ ಸಂಗತಿಯನ್ನು ಹೇಳುವೆನು. ಅದೇ ನೆಂದರೆ–ಜ್ಞಾನಭಿಕ್ಷುವು ಯಾತ್ರಿಕನ ಕಥೆಯನ್ನು ಓದುತ್ತೋದುತ್ತ 'ದೇವರ ದೀಪ'ದ ವಾಕ್ಯಕ್ಕೆ ಬಂದಾಗ ಮುಂಜಾವಿನ ಒಂಬತ್ತು ಗಂಟೆಯ ಸಮಯ. ಆಗ ಆ ವಾಕ್ಯವನ್ನು ನಮ್ಮ ನಾಯಕನು ಉಚ್ಚ ರಿಸುವುದಕ್ಕೂ ಇತ್ತ ಕಡೆಗೆ ಎಷ್ಟೂ ಲಕ್ಷ್ಯವಿಲ್ಲದ ಅಶಿಕ್ಷಿತ ಮನುಷ್ಯ ನೊಬ್ಬನು ಈತನ ತಲೆಯ ಮೇಲೆಯೇ ನೇತಾಡುತ್ತಿರುವ ವಿದ್ಯುದ್ದೀಪದ ಬಟನ್ನು ಒತ್ತುವುದಕ್ಕೂ ಏಕಕಾಲಕ್ಕೆ ಕೂಡಿತು! 'ದೇವರ ದೀಪವು ತಲೆಯ ಮೇಲೆ ಉರಿಯುತ್ತಿದೆ'ಯೆಂದೋದುತ್ತಿದ್ದ ಹಾಗೆಯೇ ಇತ್ತ ತಲೆಯ ಮೇಲೆ ಅಕಸ್ಮಾತ್ತಾಗಿ ವಿದ್ಯುದ್ದೀಪವು ಪ್ರಕಾಶಿತವಾದೊಡನೆ

ಜ್ಞಾನಭಿಕ್ಷುವಿಗೆ ಅದೊಂದು ಮುಂದಿನ ಸೂಚನೆಯೆಂದೇ ಅನಿಸಹತ್ತಿತ್ತು. ಮತ್ತು ಇದೇ ಪುಸ್ತಕವೇ ಈ ವರುಷದ ಅಂತರ್ನಿರ್ದೇಶಕ್ಕೆ ಕಾರಣವಾಗಬಹುದೆಂಬ ಕಲ್ಪನೆಯು ಮತ್ತಿಷ್ಟು ಬಲಪಟ್ಟಿತು. ಇರಲಿ, ಯಾತ್ರಿಕನ ಮುಂದಿನ ಕಥೆಯ ಕಡೆಗೆ ಹೊರಳುವಾ.

"ಆ ಬೆಳಕಿನ ಪ್ರಭೆಯಿಂದ ಆತನು ತಗ್ಗಿನ ತುದಿಯವರೆಗೆ ಮುಟ್ಟಲಾಗಿ ಅಲ್ಲಿ ಮುಂಚೆ ಇದೇ ದಾರಿಯಿಂದ ಹೋದ ಯಾತ್ರಿಕರನ್ನು ತಿಂದು ತೇಗಿದ ಎರಡು ಬ್ರಹ್ಮರಾಕ್ಷಸಗಳು ಕುಳಿತಿದ್ದವು. ಒಂದು ಗುರುಪೀಠ, ಮತ್ತೊಂದು ಗತಾನುಗತಿಕಧರ್ಮ. ಆದರೆ ಅವುಗಳಲ್ಲೊಂದು ನಿರ್ಜೀವವಾಗಿಯೂ ಮತ್ತೊಂದು ಮುದಿತನದ ಮೂಲಕ ಅರೆಜೀವವಾಗಿಯೂ ಇದ್ದದ್ದರಿಂದ ಆತನಿಗೇನೂ ಅವುಗಳಿಂದ ಬಾಧೆಯಾಗಲಿಲ್ಲ.

"ಅವುಗಳ ಮುಂದೆ ಹಾದು ಹಾಗೇ ದಾಟಿಹೋದಮೇಲೆ ಆಚೆಗೊಂದು ಎತ್ತರವಾದ ಕಟ್ಟೆಯಿದ್ದಿತು. ಯಾತ್ರಿಕರು ಮುಂದಿನ ದಾರಿಯ ಪಥಿಕರನ್ನು ನೋಡುವುದಕ್ಕೆ ಅದರ ಉಪಯೋಗವಾಗಬೇಕೆಂದು ಬೇಕೆಂತಲೇ ಅದು ಕಟ್ಟಿಸಲ್ಪಟ್ಟಿದ್ದಿತು. ನಮ್ಮ ಯಾತ್ರಿಯು ಅದರ ಮೇಲೇರಿ ಹುಬ್ಬುಗೈ ಹಚ್ಚಿ ಮುಂದಕ್ಕೆ ನೋಡಲಾಗಿ ಶ್ರದ್ಧಾತ್ಮನೆಂಬೊಬ್ಬ ಯಾತ್ರಿಯು ಕಾಣಿಸಿದನು. ಈತನು ಅಗುಬಗೆಯಿಂದ ನಡೆದು ಹೋಗಿ ಆತನನ್ನು ಕೂಡಿಕೊಂಡನು. (ಅರ್ಥಾತ್ ಆತನಲ್ಲಿ ಪುನಃ ಶ್ರದ್ಧೆ ಹುಟ್ಟಿತೆಂದು ಅರ್ಥ.)

"ಇಬ್ಬರೂ ಮಾತನಾಡುತ್ತ ಮುಂದಕ್ಕೆ ಹೋಗುವಷ್ಟರಲ್ಲಿ 'ವ್ಯರ್ಥದ ಸಂತೆ' ಯೆಂಬ ಲೋಕಜಂಜಾಲದ ಪಟ್ಟಣವೊಂದು ಬಂತು. ಅಲ್ಲಿ ಈ ಪ್ರವಾಸಿಗಳನ್ನು ನೋಡಿದವರೆಲ್ಲಾ ಗೇಲಿಮಾಡಿ ನಗಹತ್ತಿದರು. ನಮ್ಮಲ್ಲಿಂದ ಏನಾದರೂ ಕೊಂಡು ತೆಗೆದುಕೊಳ್ಳುವದಿಲ್ಲವೋ? ಎಂದು ಆ ಜನರು ಇವರಿಗೆ ಕೇಳಿದಾಗ, ಇವರು— 'ಇಲ್ಲ. ನಾವು ಸತ್ಯವನ್ನು ಕೊಂಡುಕೊಳ್ಳತಕ್ಕವರಾದುದರಿಂದ ನಿಮ್ಮ ವಸ್ತುಗಳಿಂದ ನಮಗೆ ಪ್ರಯೋಜನವಿಲ್ಲ' ಎಂದರು. ಅದಕ್ಕೆ ಅವರು— 'ಇವರನ್ನು ನೋಡಿ

ಇನ್ನುಳಿದವರೂ ಇವರಂತೆಯೇ ಆದಾರು!' ಎಂದು ಬಗೆದು ಸುಳ್ಳುಸಾಕ್ಷಿಗಳನ್ನು ಸಿದ್ಧಪಡಿಸಿ ಇವರಿಬ್ಬರನ್ನೂ ನ್ಯಾಯಸ್ಥಾನಕ್ಕೆ ಎಳೆದೊಯ್ದರು. ಅಲ್ಲಿ ಇಬ್ಬರಮೇಲೆಯೂ ಅಪರಾಧವು ಸ್ಥಿರವಾಗಿ ದೇಹಾಂತಶಿಕ್ಷೆಯು ವಿಧಿಸಲ್ಪಟ್ಟಿತು. ಆದರೆ ದೇವದೇವನ ಅಗಾಧತಂತ್ರದಿಂದ ನಮ್ಮ ಮುಖ್ಯ ಯಾತ್ರಿಕನು ಅಲ್ಲಿಂದ ಪಾರಾಗಿ ಹೋದನು; ಶ್ರದ್ಧಾತ್ಮನದು ಮಾತ್ರ ಕೊಲೆಯಾಗಿಬಿಟ್ಟಿತು!

"ಅಲ್ಲಿಂದ ಮುಂದೆ ಯಾತ್ರಿಕನು ಒಂಟಿಗನಾಗಿ ಸಾಗಲಿಲ್ಲ. ಜೊತೆಗೆ ಇನ್ನೊಬ್ಬನು ಸೇರಿದನು. ಶ್ರದ್ಧಾತ್ಮನ ವಧಭೂಮಿಯಲ್ಲಿಯೇ ತನಗೆ ಯಾತ್ರಾದೀಕ್ಷೆಯುಂಟಾಯಿತೆಂದು ಆ ಹೊಸಬನು ಹೇಳುತ್ತಿದ್ದನು. ಅವನ ಹೆಸರು ಭರವಸರಾಜ. ಮುಂದೆ ಇವರಿಬ್ಬರೂ ಕೂಡಿ ಹಾದೀ ನಡೆಯುತ್ತಿರಲು ವಿಶ್ರಾಮಭೂಮಿಯೆಂಬ ಸುಖದ ಬೈಲು ಹತ್ತಿತು. (A delicate plain called Ease.) ಅದರಲ್ಲಿ ಅವರು ಆನಂದದಿಂದ ನಡೆದರು. ಆದರೆ ಅದು ತೀರ ಚಿಕ್ಕ ಬೈಲು. ಆದುದರಿಂದ ಅವರು ಅದರೊಳಗಿಂದ ಬೇಗನೆ ಆಚೆಗೆ ಹೋದರು. ಅಲ್ಲಿಂದ ಮುಂದೆ ದಾರಿಯು ಮುಗ್ಗಲಲ್ಲಿ ತುಸು ಓಳಿಯಕ್ಕೆ ಒಂದು ಲಾಭಗಿರಿಯೆಂಬ ಗುಡ್ಡವಿದ್ದು ಅದರಲ್ಲೊಂದು ಬೆಳ್ಳಿಯ ಕಣಿಯಿದೆ. ಹಿಂದೆ ಎಷ್ಟೋ ಯಾತ್ರಿಕರು ಅಲ್ಲಿಯ ಭೂತದ ಮರುಳಮಾತಿಗೆ ಬಲೆಬಿದ್ದು ದಾರಿಯನ್ನು ಬಿಟ್ಟು ಒಳಿಯಕ್ಕೆ ಹೋಗಿ ಅಲ್ಲಿಯ ಪೊಳ್ಳು ನೆಲದ ಮೂಲಕ ಕತ್ತರಿಸಿ ಕಣಿಯೊಳಗೆ ಬಿದ್ದು ಪ್ರಾಣಕ್ಕೆ ಎರವಾಗಿರುವರು. ಇದನ್ನೆಲ್ಲಾ ಮೊದಲೇ ಅರಿತ ನಮ್ಮ ಉಭಯ ಯಾತ್ರಿಕರು ಅತ್ತ ಎಳಸದೆ ಮುನ್ನೋಡಿ ತಮ್ಮ ಹಾದೀ ಹಿಡಿದು ಸಾಗಿದರು.

"ಬಳಿಕ ಅವರು— ಪುರಾತನ ಭಗವದ್ಭಕ್ತರು 'ದೇವನದಿ ಅಥವಾ ಜೀವಜಲನದಿ' ಯೆಂದು ಹೆಸರಿಟ್ಟಿರುವ ಒಂದು ರಮ್ಯವಾದ ಹೊಳೆಯ ದಡಕ್ಕೆ ಬಂದರು. ಅವರ ದಾರಿಯು ಆ ಪುಣ್ಯಪ್ರವಾಹದ ಗುಂಟಲೆ ಬಳಿವಿಡಿದು ಹೋಗಿದ್ದುದರಿಂದ ಅವರಿಗೆ ಬಹಳೇ ಅನುಕೂಲವಾಯಿತು. ಆ

ನದಿಯು ದಂಡೆಯು ಮೇಲಿರುವ ಮರದ ಎಲೆಗಳು ಯಾತ್ರಿಕರ ಸರ್ವರೋಗ ಗಳನ್ನು ಶಮನ ಮಾಡುವವು. ಅಲ್ಲಿ ಅವರು ಕೆಲ ದಿನಗಳವರೆಗೆ ಕುಡಿದು, ತಿಂದು, ಮಲಗಿ, ಎದ್ದು ಕೊನೆಗೆ ಮುಂದಿನ ಪಯಣಕ್ಕೆ ಸಿದ್ಧ ರಾದರು.

"ಅಲ್ಲಿಂದ ಮುಂದೆ ದಾರಿಯು ಸ್ವಲ್ಪಸ್ವಲ್ಪವಾಗಿ ನದಿಯು ದಡ ವನ್ನು ಬಿಟ್ಟು ದೂರವಾಗಹತ್ತಿತು. ಅಲ್ಲದೆ ಹಾದಿಯು ತುಂಬ ಮುರೇ ಣಿನ ಹರಳುಗಳು. ಮೇಲಾಗಿ ಇವರು ಬಹಳ ದಣಿದವರು. ಹೀಗಾಗಿ ಇವರು ಒಂದಿಷ್ಟು ಅಸಮಿಸಿಗೊಳ್ಳುತ್ತಿರುವಾಗಲೆ ದಾರಿಯು ಮಗ್ಗು ಲಲ್ಲೇ ನಯವಾದ ಬೇರೊಂದು ಮಾರ್ಗವು ಅದೇಸಿಟ್ಟಿಗೆ ಹೋದಂತೆ ಕಾಣಿಸಲು, ಅವರು ಅದೇ ದಿಕ್ಕೆಂಬ ಒಂದು ಕಾರಣದಿಂದ ಮಾತ್ರ ಭ್ರಮಿಸಿ ಆ ಹಾದಿಯನ್ನು ಹಿಡಿದರು. ಆದರೆ ಅದು ನಿರಾಶಾಸುರನ ಸಂದೇಹ ದುರ್ಗಕ್ಕೆ ಒಯ್ಯುವ ಕಪಟತಂತ್ರದ ಮಾರ್ಗವೆಂದು ಅವರಿಗೆ ತಿಳಿಯು ಲಿಲ್ಲ.

"ನಿರಾಶಾಸುರನು (Giant Despair) ಅವರನ್ನು ಹಿಡಿದೊಯ್ದು ತನ್ನ ಭದ್ರವಾದ ಕೋಟೆಯಲ್ಲಿ ಸೆರೆಯಲ್ಲಿಟ್ಟನು. ಅಲ್ಲಿ ಪೂರ್ವಯಾತ್ರಿ ಕರ ಎಲುಬುಗಳು ಗುಂಪಿಗುಂಪಿಯಾಗಿ ಒಟ್ಟಿದ್ದವು. ಅಲ್ಲದೆ ಆ ಕೋಟೆ ಯೊಳಗಿನ ಸೆರೆಮನೆಯು ಬಾಗಿಲುಗಳಿಗೆ ಉಕ್ಕಿನ ಕದಗಳಿದ್ದವು. ಅಲ್ಲಿ ಅನ್ನವಿಲ್ಲದೆ ನೀರಿಲ್ಲದೆ—ಮೇಲೆ ರಕ್ಕಸನ ಕೊರಡೆಯೇಟುಗಳ ವೇದನೆ ಬೇರೆ—ಅವರು ಜೀವಿತದ ಆಶೆಯನ್ನೇ ತೊರೆದರು. ಆ ರಕ್ಕಸನ ಹೆಂಡತಿ ಭಯಭೀರಿಯೆಂಬವಳ ಸಲಹೆಯಿಂದ ಆತನು ಇವರಿಗೆ ಆತ್ಮಹತ್ಯವನ್ನು ಮಾಡಿಕೊಳ್ಳಿರೆಂದು ಒತ್ತಾಯಪಡಿಸಹತ್ತಿದನು. ನಮ್ಮ ಮುಖ್ಯ ಯಾತ್ರಿಗೆ ಅದೇ ಸರಿಯೆಂದೂ ತೋರಹತ್ತಿತು. ಆದರೆ ಆತನ ಜೊತೆ ಗಾರನಾದ ಭರವಸರಾಜನು (Mr. Hopeful) ಎದೆಗೆಡದೆ ತನ್ನ ಮಿತ್ರ ನಿಗೆ—'ಹಿಂದಿನ ಮಹಾ ಸಂಕಟಗಳಲ್ಲೆಲ್ಲ ಪಾರು ಮಾಡಿದ ಮಹಾ ದೇವನು ಈಗಲೂ ದಾಟಿಸಲಾರನೇಕೆ?' ಎಂದು ಹಿಂದಕ್ಕೆ ಹೊರಳಿ

ನೋಡಹತ್ತಿದನು. ಆಗ ಸೂರ್ಯೋದಯದ ಸಮಯ. ಆದರೆ ಅವ ರಿಬ್ಬರೂ ನೆಲಮಾಳಿಗೆಯಲ್ಲಿ. ಆದರೂ ಆಗ ನಮ್ಮ ಯಾತ್ರಿಕನಿಗೆ ಏನೋ ನೆನಪಾದಂತಾಗಿ ಆತನು-ಆಹಾ! ನಾನೆಂಥಾ ಹುಚ್ಚನು! 'ನಮೋ ಭಕ್ತಃ ಪ್ರಣಶ್ಯತಿ'ಯೆಂಬ ವಾಗ್ದಾನವು ನನಗೆ ಸಿಕ್ಕಿದೆಯಲ್ಲ! ಆ ಬೀಗದ ಕೈಯು ಎಂಥ ಬೀಗಗಳನ್ನಾದರೂ ಅನಾಯಾಸವಾಗಿ ತೆರೆಯಬಲ್ಲದು!' ಎಂದವನೇ ಎದ್ದು ಎಲ್ಲ ಬಾಗಿಲುಗಳಬೀಗಗಳನ್ನು ಒಂದರ ಹಿಂದೊಂದು ತೆಗೆದುಹಾಕಿ, ಆ ರಕ್ಕಸನು ಎಚ್ಚತ್ತು ಏಳುವಷ್ಟರೊಳಗಾಗಿ ಅಲ್ಲಿಂದ ದಾಟಿ ಹೋಗಿ ತಮ್ಮ ದಾರಿಯನ್ನು ಸೇರಿದರು.

"ಇಬ್ಬರೂ ಕೂಡಿ ಮುಂದೆ ಒಂದು ತುಸು ದಾರಿಯನ್ನು ನಡೆ ಯುವಷ್ಟರಲ್ಲಿ ತಮ್ಮ ವಸತಿಸ್ಥಾನವೆಂದು ಮೊದಲೇ ಗೊತ್ತು ಮಾಡಿ ಕೊಂಡಿದ್ದ 'ರಮ್ಯಗಿರಿ'ಗಳಿಗೆ ಬಂದು ತಲುಪಿದರು. ಅಲ್ಲಿ ವಾಸವಾಗಿ ರುವ ದೇವನ ಗೋವಳರು ಅವರನ್ನು ಅತ್ಯಾದರದಿಂದ ಬರಮಾಡಿ ಕೊಂಡರು. ಅಲ್ಲಿದ್ದ ನಾಲ್ವರು ಗೋವಳರ ಹೆಸರು ಕೇಳಿದರೆ ಆ ಸ್ಥಾನದ ಮಹಿಮೆ ಗೊತ್ತಾಗುವದು. ಅವರು ಯಾರೆಂದರೆ—ಜ್ಞಾನೇಶ್ವರ, ಅನುಭವನಾಥ, ಜಾಗರಮೂರ್ತಿ, ಯಥಾರ್ಥರಾಜ. ( Knowledge, Experience, Watchful, Sincere.) ಇವರೆಲ್ಲರು ಅಲ್ಲಿಗೆ ಬಂದು ತಲುಪಿದ ಯಾತ್ರಿಕರನ್ನು ಬಹಳವಾಗಿ ಪರಾಂಬರಿಸುವರು. ಅಲ್ಲಿ ಅವರು ಬಂದವರನ್ನು ಕೆಲದಿನಗಳವರೆಗೆ ವಿಶ್ರಾಂತಿಗೆಂದು ಇಟ್ಟುಕೊಂಡು ಅಲ್ಲಿಯ ವಿವಿಧ ಚಮತ್ಕಾರಗಳನ್ನು ತೋರಿಸುವರು. ಅವುಗಳಲ್ಲೆಲ್ಲಾ ಮುಖ್ಯವಾದುದೆಂದರೆ ದುರ್ಗತಿಗಿಳಿಯುವ ಜೀವಗಳ ಘೋರದುರ್ದ ಶೆಯೇ. ಅದನ್ನು ನೋಡಿ ಯಾತ್ರಿಕರ ಎದೆಯು ತಲ್ಲಣಿಸಿ ಬಿಡುವದು. ಆ ಮೇಲೆ ಅವರು ಅಲ್ಲಿಂದ ಮುಂದಕ್ಕೆ ತಮ್ಮ ಪಯಣವನ್ನು ಬೆಳಿಸ ಲೆಳಸಲು, ಗೋವಳರು ಹೀಗೆಂದರು—ಅಣ್ಣಗಳಿರಾ, ನಮ್ಮಲ್ಲಿ ಒಂದು ಬಗೆಯ ಕಾಜಿನ ಹರಳುಗಳಿವೆ. ಅವುಗಳೊಳಗಿಂದ ಹಾಯಿಸಿ ನೋಡಿದರೆ ನೀವು ಮುಂದೆ ತಲುಪಬೇಕಾಗಿರುವ ಸ್ವರ್ಗನಗರಿಯು ಕಾಣಿಸುತ್ತದೆ. ಆದುದರಿಂದ ನೀವು ಅದನ್ನಿಷ್ಟು ನೋಡಿಕೊಂಡು ಹೋಗಿರಿ' ಹೀಗೆಂದು

ಹೇಳಿ ಆದರಂತೆ ಮುಂದಿನದನ್ನೆಲ್ಲ ಯಂತ್ರಸಹಾಯದಿಂದ ತೋರಿಸಿದರು. ಮತ್ತು ಮುಂದಿನ ದಾರಿಯಲ್ಲಿ ಇನ್ನೂ ಕಂಟಕಗಳು ತಪ್ಪಿಲ್ಲವೆಂದು ಹೇಳಿ ಅವುಗಳ ಕೈಗೆ ಬೀಳಬೇಡಿರೆಂದು ಮುಂಜಾಗ್ರತೆ ಪಡಿಸಿ ಕಳುಹಿಸಿಕೊಟ್ಟರು.

ತುಸು ಮುಂದಕ್ಕೆ ಹೋಗುವಷ್ಟರಲ್ಲಿ ಅವರ ಮುಂದೆ ಒಬ್ಬ ಸಾಧುವೇಷದ ಪುರುಷನು ಅದೇ ದಾರಿಯಿಂದ ನಡೆದಿರುವುದನ್ನು ಕಂಡು- 'ಅಯ್ಯಾ, ಎಲ್ಲಿಗೆ ಹೋಗುವಿರಿ?' ಎಂದು ಕೇಳಿದಾಗ ಆತನು— 'ಬನ್ನಿರಿ–ನಾನೂ ನೀವು ಹೊರಟಲ್ಲಿಗೇ ನಡೆದಿದ್ದೇನೆ' ಎಂದನು. ಅದಕ್ಕೆ ಅವರು ಏನೊಂದನ್ನು ಆಲೋಚಿಸದೆ ಆತನ ವೇಷಕ್ಕೆ ಭ್ರಮಿಸಿ ಬೆನ್ನು ಹತ್ತಿ ಕಾಲೊಳಗಿನ ದಾರಿಯನ್ನು ಕಳಕೊಂಡು ಕಾಡುಪಾಲಾದರು. ಆಗ ದಿಗಿಲುಗೊಂಡು ಆ ಹೊಸಬನ ಮುಖವನ್ನು ನೋಡಿದರು. ಅಯ್ಯೋ! ಅದೇನು ಹೇಳಲಿ! ಅದೊಂದು ಕಾಳರಕ್ಕಸ! ಹಿಂದಿನ ದಿನ ಗೋವಳರು ಹೇಳಿಕೊಟ್ಟ ಕಂಟಕಗಳೊಳಗಿನದೇ ಇದೂ ಒಂದು. ಇದರ ಹೆಸರು ಮರುಳುಮಾತಂಗ ( Flatterer )

"ಯಾತ್ರಿಕರು ಕಕ್ಕಾವಿಕ್ಕಿಯಾಗಿ ನಿಂತಿರುವಾಗ ದೇವಪುರುಷನೊಬ್ಬನು ಬಂದು ಇವರನ್ನು ಒಳಿತಾಗಿ ಥಳಿಸಿ, ಬೈದು, ಅಂದು, ಕೊನೆಗೆ ಹೀಗೆ ಹೇಳಿದನು—'ಎಲಾ, ನಾನು ಪ್ರೀತಿಮಾಡುವವರನ್ನು ಗದರಿಸುತ್ತೇನೆ ಮತ್ತು ದಂಡಿಸುತ್ತೇನೆ. ಆದುದರಿಂದ ಉತ್ಸಾಹವುಳ್ಳವರಾಗಿರಿ.'

"ಆ ಆಗಂತುಕ ಸಹಾಯಕನ ಮಹೋಪಕಾರವನ್ನು ಕೊಂಡಾಡುತ್ತ ಮುಂದಕ್ಕೆ ಹೋಗುತ್ತಿರಲು ಮಹೇಂದ್ರಜಾಲದ ಭೂಮಿಯೆಂಬುದೊಂದು (Enchanted ground) ಮೋಹಿನಿಯ ನಾಡು ಹತ್ತಿತು. ಅಲ್ಲಿ ಇವರಿಗೊಂದು ಬಗೆಯ ದುಂದು ಬಂದಂತಾಗಿ ಕಣ್ಣೀ ಮುಚ್ಚಹತ್ತಿದವು. ಆದರೆ ಹಿಂದಿನ ಅಪಾಯದ ನೆನಪು ಇನ್ನೂ ಮಾಸಿರಲಿಲ್ಲವಾದುದರಿಂದ ಮುಂದಿನ ಭರವಸವನ್ನು ಕುರಿತು ಚರ್ಚೆ

ಮಾಡುತ್ತ ಮಾಡುತ್ತ ಆ ತೊಕಡಿಕೆಯ ನಾಡನ್ನು ಹೇಗಾದರೂ ಮಾಡಿ ಒಮ್ಮೆ ದಾಟಿದರು.

"ಮುಂದೆ—ವಿವಾಹದೇಶವೆಂದು (Land of Beulah) ಪುರಾತನ ಶರಣರು ಬಣ್ಣಿಸಿದ ಮಹಾ ರಮಣೀಯವಾದ ಉದ್ಯಾನವನವು ಬಂತು. ಅಲ್ಲಿಯ ಗಾಳಿ ಬಹು ಸೊಗಸಾದದ್ದು. ಅಲ್ಲಿ ಗಿಳಿ ಪಾರಿವಾಳಗಳ ಮಧುರ ಶಬ್ದವು ಯಾತ್ರಿಕರ ಹೃದಯವನ್ನು ಹರಣಮಾಡಿಬಿಡುತ್ತದೆ. ಅಲ್ಲಿ ಸಂದೇಹ ಸಂಕಟಗಳ ಹೆಸರೇ ಗೊತ್ತಿಲ್ಲ. **ಆ ದೇಶದಲ್ಲಿ ಸಂಚರಿಸುವಾಗ ಮುಂಚೆ ಎಲ್ಲಿಯೂ ಉಂಟಾಗದ ಮಹಾ ಸಂತೋಷವು ಅವರಿಗೆ ಲಭಿಸಿತು.** ಅದು ಸ್ವರ್ಗನಗರಿಯ ಮಹಾಪ್ರಭುವಿನ ಉದ್ಯಾನವನವು. ಯಾತ್ರಿಕರಿಗೆ ಅದು ತಮ್ಮದೇ ಎನ್ನುವಷ್ಟು ಅಲ್ಲಿ ಸ್ವಾತಂತ್ರ್ಯವಿರುವುದು. ಅಲ್ಲಿಯ ದ್ರಾಕ್ಷೀ ಹಣ್ಣುಗಳು ಮಲಗಿದವರ ತುಟಿಗಳನ್ನು ಕೂಡ ಮಾತಾಡುವ ಹಾಗೆ ಮಾಡುವಷ್ಟು ರುಚಿಕರವಾಗಿರುವವು.

"ಅಲ್ಲಿ ಅವರು ದಣುವಾರಿಸಿಕೊಂಡು ಹೊಸ ಚೈತನ್ಯವನ್ನು ಪಡೆದು, ಮುಂದೆ ಅಲ್ಲೇ ಕಂಗೊಳಿಸುತ್ತಿರುವ ರತ್ನಖಚಿತವಾದ ದಿವ್ಯ ಸ್ವರ್ಗನಗರಿಗೆ ಏರಿಹೋಗಲಣಿಯಾದರು. ಆಗ ಇಬ್ಬರು ದೇವಪುರುಷರು ಕಾಣಿಸಿಕೊಂಡು ಯಾತ್ರಿಕರಿಬ್ಬರನ್ನೂ ಸ್ತುತಿಸಿ ಹೊಡಮುಟ್ಟು ಹೇಳಿದ್ದೇನೆಂದರೆ—'ಮಹನೀಯರೇ, ಇಲ್ಲಿ ಈ ವಿವಾಹವನಕ್ಕೂ ಆ ಸ್ವರ್ಗನಗರಿಗೂ ನಡುವೆ ಮರಣನದಿಯೆಂಬುದೊಂದುಂಟು. ಅದನ್ನು ನೀವು ದಾಟಲಾರದೆ ಅಲ್ಲಿಗೆ ಸೇರಲಾರಿರಿ.'

"ಆ ಮಾತಿಗೆ ಇವರು—ಇದನ್ನು ಬಿಟ್ಟು ಬೇರೆ ಸುಸೂತ್ರವಾದ ದಾರಿಯಿಲ್ಲವೇ? ಎಂದು ಕೇಳಿದಾಗ ಅವರು—'ಇಲ್ಲದೆಯಿಲ್ಲವಾದರೂ ಆ ದಾರಿಯಿಂದ ಹೋಗುವವರು ಏಸೋ ಯುಗಗಳಲ್ಲಿ ಒಬ್ಬಿಬ್ಬರು ಮಾತ್ರವೇ. ಆದರೆ ಸರ್ವಸಾಮಾನ್ಯವಾಗಿ ಉಳಿದವರೆಲ್ಲರೂ ಹೋಗಬೇಕಾದ ಹಾದಿಯು ಈ ನದಿಯೊಳಗಿಂದಲೇ. ಇಲ್ಲಿ ಈಜುಬಿದ್ದು ನೀವು

ನಿಮ್ಮ ಹಳೇ ಉಡುಪನ್ನು ವಿಸರ್ಜಿಸಬೇಕಾಗುವುದು.' ಎಂದು ಹೇಳಿದರು.

"ಅದಕ್ಕೆ ಆಗಲಿ! ಎಂದು ಸಮ್ಮತಿಸಿ ಆ ಯಾತ್ರಿಕರಿಬ್ಬರೂ ನದಿಯೊಳಗೆ ನಡೆದರು. ಆದರೆ ಸ್ವಲ್ಪ ಮುಂದಕ್ಕೆ ಹೋಗುವಷ್ಟರಲ್ಲಿ ಕಾಲುಹಾರಿ ಇಬ್ಬರೂ ಗೋಳಿಡಹತ್ತಿದರು. ಆಗಲೂ ಆ ದೇವಪುರುಷರು ಅಲ್ಲೇ ದಡದ ಬಳಿಯಲ್ಲಿ ನಿಂತುಕೊಂಡೇ ಇದ್ದರು. ಆಗ ಕಂಗೆಟ್ಟ ಯಾತ್ರಿಕರು ಅವರಿಗೆ ಹೀಗೆ ಬಿನ್ನವಿಸಹತ್ತಿದರು—'ಮುಳುಗುತ್ತಿರುವ ನಮಗೆ ನೀವು ಸಹಾಯಕರಾಗಲಿಕ್ಕಾಗದೇ?' ಅದಕ್ಕೆ ಅವರು ಮರು ನುಡಿಗೊಟ್ಟದ್ದೇನೆಂದರೆ—'**ಇಲ್ಲ ಈ ವಿಷಯದಲ್ಲಿ ನಾವು ನಿಮಗೆ ನೆರವಾಗಲಾರೆವು. ನಿಮ್ಮದು ನೀವೇ ಪಾರಾಗಬೇಕು. ಈ ಹೊಳೆಯ ಆಳವಾಗಲಿ, ಹಾಯಿಗಡವಾಗಲಿ–ಪ್ರಭುವಿನಮೇಲೆ ನೀವಿಟ್ಟ ವಿಶ್ವಾಸದಂತೆ ನಿಮಗೆ ತೋರುವುದು.**'

"ಕೊನೆಗೆ ಮಹಾಯಾತ್ರಿಯು ಬಹಳೇ ಗುಟುಕರಿಸಿ–'ಅಯ್ಯೋ! ನಾನು ಹಾಲೂ ಜೇನೂ ಹರಿಯುವ ನಾಡನ್ನು ಸೇರಲಾರೆನಯ್ಯೋ! ನಡುವೇ ನಾನು ವ್ಯರ್ಥವಾಗಿ ಹೋಗುವೆನಲ್ಲಾ!' ಎಂದು ಕೂಗಿಕೊಂಡಾಗ ಭರವಸರಾಜನು ಹೀಗೆ ಒದರಿ ಹೇಳಿದನು—'ದೇವದೇವನ ದಯವಿದ್ದರೆ ನಮಗೆ ಎಲ್ಲಿಯೂ ಚ್ಯುತಿಯಿಲ್ಲವೆಂಬುದನ್ನು ಮರೆಯದಿರು. ನನಗೀಗ ಮೆಲ್ಲಗೆ ಒಂದಿಷ್ಟು ನೆಲೆ ಹತ್ತಿದಂತಾಗಿದೆ. ಎದೆಗೆಡದೆ ಇನ್ನಿಷ್ಟು ಈಜಿ ಇತ್ತಕಡೆಗೆ ಬಾ.' ಈ ಅಭಯವಾಣಿ ಕೇಳಿಸುತ್ತಲೆ ಆತನಿಗೆ ಧೈರ್ಯವಾಯಿತು. ಮುಂದೆ ಕ್ಷಣಮಾತ್ರದಲ್ಲಿಯೇ ಆತನಿಗೂ ಕಾಲಿಗೆ ನೆಲ ಹತ್ತಿತು. ಇಬ್ಬರೂ ಕೂಡಿ ಕೈಕೈ ಹಿಡಿದು ಆಚೆಯ ದಡವನ್ನು ಸೇರಿದರು!

"ಆಗ ಅದೇ ಆ ದೇವಪುರುಷರಿಬ್ಬರೂ ಈಚೆಯ ದಡದಿಂದ ಅಂತರ್ಮಾರ್ಗದಿಂದ ಹಾರಿ ಯಾತ್ರಿಕರ ಬಳಿಗೆ ಹೋದರು. ಅವರು ಯಾತ್ರಿಗಳಿಬ್ಬರಿಗೂ ಪೊಡಮಟ್ಟು ಸ್ತುತಿಸಿ ಕೈಗೊಟ್ಟು ಗಿರಿಶಿಖರದ

ಮೇಲಿರುವ ಪ್ರಕಾಶಮಾನವಾದ ದಿವ್ಯಮಹಾನಗರಿಯ ಹೆಬ್ಬಾಗಿಲಿಗೆ ಬಯ್ಯು ಮುಟ್ಟಿಸಿದರು. ಕೂಡಲೆ ಅಲ್ಲಿ ಅಪ್ಸರ ಕುಮಾರಿಕೆಯರು ಆನಂದವಾರ್ತೆಯ ತುತೂರಿಗಳನ್ನು ಊದಿದರು. ಸೂರ್ಯಪ್ರಕಾಶದಂತೆ ಶೋಭಿಸುತ್ತಿರುವ ಆ ನಗರಿಯ ಒಳಭಾಗದಲ್ಲಿ ಸರ್ವ ಪುರಾತನರಿಂದ ಸುತ್ತುವರಿದು ಶೋಭಿಸುತ್ತಿದ್ದ ಮಹಾಪ್ರಭುವಿನ ಬಳಿಸಾರಿ ನಮ್ಮ ಯಾತ್ರಿಕರು ಪರಮ ಧನ್ಯರಾದರು!"

---

## ೧೨

ಯಾತ್ರಿಕನ ಪಯಣಗತಿಯಲ್ಲಿ ನಮ್ಮ ನಾಯಕನಿಗೆ ಆಶ್ಚರ್ಯವೆನಿಸಿದ್ದೆಂದರೆ ಅನುಭಾವದ ಸ್ಥಲಕ್ರಮವು. ಅದು ಹೇಗೆಂದರೆ ಮೂರು ಆನಂದದ ಮೆಟ್ಟಲುಗಳು, ಮತ್ತು ಮೂರು ದುಃಖದ ಮೆಟ್ಟಲುಗಳು. ಈ ದುಃಖ ಹರ್ಷಗಳ ಮೂರು ಮೂರು ಪ್ರಕಾರಗಳನ್ನೂ ನಾನು ಹಿಂದೆಯೇ ವಿವರಿಸಿದ್ದೇನೆ. ಆದರೂ ಇಲ್ಲಿ ಮತ್ತೊಮ್ಮೆ ಒಂದೇ ಕಡೆಗೆ ಸೇರಿಸಿ ಹೇಳಿದರೆ ತಪ್ಪಾಗದು.

ಅಧ್ಯಾತ್ಮವೇ ತನ್ನ ಜೀವನದ ಗುರಿಯೆಂದು ಸ್ಥಿರಸಂಕಲ್ಪಮಾಡಿದ ಮೇಲೆ ದೇವನ ಅಸ್ತಿತ್ವದ ಪ್ರತ್ಯಕ್ಷಾನುಭವದ ವಿಷಯದಲ್ಲಿ ಜೀವಕ್ಕೆ ಆಕಾಂಕ್ಷೆ ಹೆಚ್ಚುವುದರಿಂದ ಅಂತರಂಗವು ಕನಸುಮನಸಿನಲ್ಲೆಲ್ಲ ತಳಮಳಿಸಹತ್ತುತ್ತದೆ. ಆ ತಳಮಳದಿಂದ ಜೀವಭಾವವು ಪಲ್ಲಟಿಸಿ ಆತ್ಮಭಾವದಲ್ಲಿ ಪರಿಣಮಿಸಲಿಕ್ಕೆ ಮೊದಲಾಗುತ್ತದೆ. ಸಾಮಾನ್ಯವಾಗಿ ನಾವು ಅನೀತಿ ಅನ್ಯಾಯಗಳೆಂದು ಯಾವ ಯಾವ ಮಾತುಗಳಿಗೆ ಅನ್ನುವೆವೋ ಜೀವಭಾವದ ಮರಕ್ಕೆ ಅವೇ ಕೊಂಬೆ ರೆಂಬೆಗಳು. ಭಕ್ತಿ ವಿರಹದಿಂದ ಅವು ಕಳಚಿ ಬೀಳುವವು. ಅದರ ಮೂಲಕವೇ ಈಶನ ಅಸ್ತಿತ್ವವು ಅಂತಃಕರಣಕ್ಕೆ ಪ್ರಮಾಣಿತವಾಗುವುದು. ಇದಕ್ಕೇ ನಾನು ಪೂರ್ವರಂಗದಲ್ಲಿ 'ಪ್ರಥಮ ಪರಿಚಯ'ವೆಂದು ಹೇಳಿರುವೆನು. ಇಲ್ಲಿ

ಕೆಲದಿನಗಳ ವರೆಗೆ ಈ ಅವಸ್ಥೆಯು ಒಳಗೊಳಗೇ ಪೂರ್ಣದಶೆಗೆ ಬರುತ್ತಾ ಇರುವುದು. ಆಗ ಸಾಧಕನ ಅಂತರಂಗವು ಎಷ್ಟೋ ಸಮಾಧಾನ ಹೊಂದುವುದು. ಸಮಾಧಾನದ ಪ್ರಥಮ ದರ್ಶನವೆಂದರೆ ಇಲ್ಲಿಯೇ. ಮೊದಲನೆಯ ವಿಧದ ಸಂಕಟವನ್ನೂ ಮೊದಲನೆಯ ವಿಧದ ಸಮಾಧಾನ ವನ್ನೂ ಇಲ್ಲಿ ನಾವು ನೋಡಿದಹಾಗಾಯಿತು.

ಬಳಿಕ–ಒಂದು ಹೆರಿಗೆ ಮುಗಿದು ಆ ಶಿಶು ಒಂದಿಷ್ಟು ಶಕ್ತವಾದೊಡನೆ ಮುಂದಿನ ಅವಸ್ಥೆಯು ಗರ್ಭಧಾರಣೆಗೆ ಆರಂಭ. ಮತ್ತೆ ನವ ಮಾಸಗಳ ಕಷ್ಟ ತಪ್ಪಿದ್ದಿಲ್ಲ. ಉಂಡ ಕೆಲಹೊತ್ತಿನ ಮೇಲೆ ಹಿಂದಿನ ತೃಪ್ತಿಯೆಲ್ಲಾ ಮಾಯವಾಗಿ ಹೊಸಾ ಹಸಿವು ಮತ್ತೆ ಮೈದೋರು ವಂತೆ ಇದೀಗ ಹಿಂದಿನ ಆ 'ಪ್ರಥಮ ಪರಿಚಯ'ದ ಸಮಾಧಾನವೆಲ್ಲಾ ಲೋಪವಾಗಿ, ಅದಕ್ಕಿಂತ ಹೆಚ್ಚಿನ ನಿಕಟವಾದ ಈಶಸಾನ್ನಿಧ್ಯದ ಅನು ಭವದ ಆಶೆ ಹುಟ್ಟಿ, ಅದರ ಸಲುವಾಗಿ ಹೊಸ ಬೇಗೆಯು ಹೊತ್ತು ತ್ತದೆ. ಈಗ ಜೀವಭಾವದ ಮೋಟುಮರದ ಆ ಮೊಂಡ ಬೊಡ್ಡೆಯು ಸುಟ್ಟುಹೋಗುವುದಕ್ಕೆ ಆರಂಭವಾಗುತ್ತದೆ. ಸ್ವಾರ್ಥವನ್ನು ಬದಿ ಗೊತ್ತಿ ನಿಲ್ಲುವುದಕ್ಕೆ ತನ್ನ ಅಂತಃಕರಣವು ಇನ್ನೂ ಅಸಮರ್ಥ ವಿದೆಯೆಂದು ಆಗ ಸಾಧಕನಿಗೆ ಗೊತ್ತಾಗುವದರಿಂದ ತನ್ನ ಬಗೆಗೇ ತನಗೆ ತಾತ್ಸಾರವುಂಟಾಗುತ್ತದೆ. ಶ್ರೀ ಬಸವಣ್ಣನವರು 'ಮಾವಿನಕಾಯೊಳ ಗೊಂದು ಎಕ್ಕೆಯಕಾಯಿ ನಾನಯ್ಯ!' 'ಎನ್ನ ಚಿತ್ತವೆಂಬುದು ಅತ್ತಿಯ ಹಣ್ಣು. ಒಳಗೆ ನೋಡಿದರೆ ಹುರುಳಿಲ್ಲ ಹುರುಳಿಲ್ಲವಯ್ಯಾ!' ಎಂದು ಆತ್ಮತಾತ್ಸಾರತೆಯ ವಚನಗಳನ್ನು ಹಾಡಿದ್ದು ಇಂತಹ ಕಾಲದಲ್ಲಿಯೇ. ಮೊದಲನೆಯ ಪ್ರಕಾರದ ಸಂಕಟಕಾಲದಲ್ಲಿ ಆತ್ಮಹತ್ಯಕ್ಕೆ ಜೀವಪೆಳಸು ತ್ತಿದ್ದರೆ ಈ ಕಾಲದಲ್ಲಿ ವಿವೇಕಗೆಟ್ಟ ತ್ಯಾಗಭಾವಕ್ಕೆ ಸಾಧಕನ ಅಂತಃ ಕರಣವು ಬಲಿಬೀಳುತ್ತದೆ. ಕೈಹಿಡಿದ ಮಡದಿಯನ್ನು ಬೇಡಿದರೂ ಕೂಡ ಬಸವಣ್ಣನವರು ಕೊಡಲಿಕ್ಕೆ ಸಿದ್ಧರಾದದ್ದು ಇಂತಹ ಕಾಲದ ಲ್ಲಿಯೇ ಎಂದು ಹೇಳಬಹುದು. ಏನೇ ಆಗಲಿ. ಆದರೆ ಈ ತೀಕ್ಷ್ಣ ಆತ್ಮತಾತ್ಸಾರತೆಯಿಂದ ಜೀವಭಾವದ ಲೇಪವು ತೊಳೆದುಹೋಗುತ್ತದೆ.

ಅಂತರಂಗದ ಕನ್ನಡಿಯು ಹೀಗೆ ನಿರ್ಲೇಪವಾಗುವದರಿಂದ ಅದರಲ್ಲಿ ಈಶನ ಪ್ರತಿಬಿಂಬವು ಹೆಚ್ಚಾಗಿ ಪಡಿಮೂಡುತ್ತದೆ. ಇದಕ್ಕೇ ನಾನು ಪೂರ್ವರಂಗದಲ್ಲಿ 'ಪ್ರಗಾಢಸ್ಪರ್ಶ' ವೆಂದು ಹೆಸರು ಕೊಟ್ಟಿದ್ದೇನೆ. ಈ ಘನಸ್ಪರ್ಶದಿಂದ ಆತ್ಮದಲ್ಲಿ ಒಂದುಬಗೆಯ ಅನನುಭೂತವಾದ ತೃಪ್ತಿಯು ಪ್ರಕಟವಾಗುವದು. ಇಲ್ಲಿ ಆತ್ಮಕ್ಕೊಂದು ಅಪೂರ್ವವಾದ ಬಲವು ಬರುವದು. ಅದರ ನಿಗೂಢ ತೇಜವೀಗ ಎಷ್ಟೋ ಹೊರ ಹೊಮ್ಮುವದು. ಈಶನು ಸದಾಸರ್ವತ್ರ ಸನ್ನಿಹಿತನಾಗಿರುವನೆಂದು ಅಂತರಂಗಕ್ಕೆ ಅನಿಸಹತ್ತುವದು. ಈ ಅನಿಸಿಕೆಯು ಎಂದೆಂದಿಗೂ ಅಳಿಯ ಲಾರದೆಂದು ಅನಿಸುವಷ್ಟು ಅದು ಘನೀಭೂತವಾಗಿಬಿಟ್ಟಿರುವದು. ಇಲ್ಲಿಗೆ ನಾವು ಎರಡನೇ ಪ್ರಕಾರದ ಸಂಕಟವನ್ನೂ ಸಂತೋಷವನ್ನೂ ಕಂಡುಂಡ ಹಾಗಾಯಿತು. ಬಹುತರವಾಗಿ ಬಹಳ ಆತ್ಮಗಳು ಇಲ್ಲಿಗೇ ನಿಲ್ಲುವವೆಂದು ಅನುಭಾವ ಶಾಸ್ತ್ರಜ್ಞರ ಅಭಿಪ್ರಾಯವಾಗಿದೆ.

ಆದರೆ ಕೆಲವು ಸಾಧಕರಿಗೆ ಇದರ ಮುಂದೆಯೂ ಮತ್ತೆ ಮಗು ದೊಂದು ಬಗೆಯ ಸಂಕಟವು ಅದರ ಮುಂದಿನ ಮತ್ತೊಂದು ಶಾಂತಿಯು ಪ್ರಾಪ್ತಿಯಾಗುವ ಸಲುವಾಗಿ ಆರಂಭವಾಗುವದು. ಮಗುಗಳಿಗೆ ಹಲ್ಲು ಗಳು ಮೊಳೆಯಬೇಕಾದರೆ ವ್ಯಾಧಿವಿಡ್ಡೂರಗಳ ಹಾವಳಿಯೊಳಗಿಂದಲೇ ಅವು ಹೊರಹಾಯಬೇಕಾಗುವದಿಲ್ಲವೆ? ಆದರಲ್ಲಿಯೂ ಶೂಲದ ಹಲ್ಲು ಗಳು ಹೆತ್ತವರನ್ನೂ ಕೂಡ ಶೂಲಕ್ಕೆ ಹಾಕುವವೆಂಬುದು ಗಾದೆಯು ಮಾತಾಗಿಬಿಟ್ಟಿದೆಯಲ್ಲವೆ? ಇದೀಗಿನದು ಶೂಲದ ಹಲ್ಲುಗಳು ಹೊರಡು ವಾಗಿನಂಥ ನಭೂತೋ ನಭವಿಷ್ಯತಿ ಸಂಕಟ! ಹಿಂದಿನ ಸ್ಥಲದಲ್ಲಿ ಜೀವ ಭಾವದ ಬೊಡ್ಡೆಯು ಸುಟ್ಟಿದ್ದರೂ ಭೂಗತವಾಗಿ ಅದರ ಬೇರುಗಳು ತೀರ ಒಳಗೊಳಗಿನ ಪ್ರದೇಶದಲ್ಲಿ ಇನ್ನೂ ಅವಿತುಕೊಂಡು ಕುಳಿತಿರುವ ವೆಂಬುದು ಸಹಜ. ಈಗ ಅವುಗಳ ವಂಶವೆಲ್ಲ ಹುರಿದು ಹೋಗಬೇಕಾಗು ತ್ತದೆ. ಆದರೆ ಅದು ಸಾಧಕನ ಸ್ವಶಕ್ತಿಗೆ ಮೀರಿದ ಮಾತಾಗಿರುತ್ತದೆ. ಯಾಕೆಂದರೆ ಅವುಗಳ ಆಶ್ರಯ ಸ್ಥಾನವು ಸಾಧಕನ ಈಗಿನ ಅವಸ್ಥೆಗೆ ಇನ್ನೂ ನಿಲುಕಲಾರದಷ್ಟು ಬಹು ದೂರದಲ್ಲಿರುತ್ತದೆ. ಬಹು ಪೂರ್ವ ಜನ್ಮಗಳ ಸಂಸ್ಕಾರ ರಾಶಿಯಲ್ಲಿ ಆ ಬೇರುಗಳಿರುತ್ತವೆಯೆಂದು ಅರವಿಂದರು

ಹೇಳುತ್ತಾರೆ. ಅಲ್ಲದೆ ಅವುಗಳನ್ನು ಸಾಯಗೊಡಬಾರದೆಂದು–ಅವುಗಳ ಮೇಲೆ ಉಪಜೀವಿಸಿಕೊಂಡಿರುವ ಸೂಕ್ಷ್ಮಲೋಕದ ಜೀವಿಗಳು ಅವುಗಳ ಮೇಲುಕಟ್ಟಿ ಸಾಧಕನೊಡನೆ ಕಾದಲೆಳಸುತ್ತಿರುವವೆಂದು ಬೇರೆ ಅವರೇ (ಅರವಿಂದರೇ) ಹೇಳುತ್ತಿದ್ದಾರೆ. ಇದೇನೋ ನಮಗೆಲ್ಲಾ ಬುದ್ಧಿಗೆ ಹರಿಯದ ಮಾತಾಗಿದೆಯಾದರೂ ಈ ಸ್ಥಲದೊಳಗಿನ ಕಾರ್ಯರಂಗವು ಬಹಳೇ ಗೂಢಸ್ಥಳವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಸಾಧಕನ ಆತ್ಮಶಕ್ತಿಯು ಇನ್ನೂ ಅಷ್ಟೊಂದು ಚೂಪಾಗಿರುವದಿಲ್ಲವೆಂತಲೇ ಇಲ್ಲಿ ನಭೂತೋ ನಭವಿಷ್ಯತಿ ಸಂಕಟವಾಗುತ್ತದೆ. ಈ ಅಪರಿಮಿತ ಸಂಕಟದ ಮೂಲಕ ಆತ್ಮಭಾವದ ಅಪರಿಮಿತವಾದ ಶುದ್ಧೀಕರಣವಾಗಬೇಕಾದುದು ಸಯುಕ್ತಿಕವೇ ಆಗಿದೆಯಲ್ಲವೆ? ಅದರ ಫಲಸ್ವರೂಪವಾಗಿ ಈಶಸಂಕಲ್ಪದ ಪ್ರತ್ಯಕ್ಷಾನುಭವವು ಜೀವನಿಗೆ ಬರಲೇಬೇಕಲ್ಲವೇ? ಹಿಂದಿನ ಸ್ಥಲದಲ್ಲಿ "**ಸ್ಪರ್ಶ**"ವೆಂಬ ಶಬ್ದವನ್ನು ಉಪಯೋಗಿಸಿದೆಯಾದರೆ ಈ ಸ್ಥಲದಲ್ಲಿ "**ದರ್ಶನ**"ವೆಂಬ ಶಬ್ದವನ್ನು ಉಪಯೋಗಿಸಬೇಕಾಗುವುದು. ಇಲ್ಲಿ **ಸ್ಪರ್ಶ** ಮತ್ತು **ದರ್ಶನ** ಎಂಬ ಶಬ್ದಗಳು ಬಹಳೇ ವ್ಯಾಪಕಾರ್ಥದಲ್ಲಿ ಒಳಿಸಲ್ಪಟ್ಟಿವೆಯೆಂಬುದನ್ನು ವಾಚಕರು ಮರೆಯಲಾಗದು. ಇಲ್ಲಿಗೆ ಉತ್ತರ ರಂಗದ ಆರಂಭವು. ಅವತಾರಿಗಳೆಂದು ನಾವು ಹೇಳುತ್ತಿರುವ ಮಹಾಪುರುಷರಿಗಾದ "**ಸಾಕ್ಷಾತ್ಕಾರ**"ವೆಂದರೆ ಇದೇ.

ಇಲ್ಲಿಗೇ ಮುಗಿಯಿತೆಂದು ತಿಳಿಯಲಾಗದು. ಉತ್ತರ ರಂಗದಲ್ಲಿ ಇನ್ನೂ ಎಷ್ಟೋ ಉಪವಿಭಾಗಗಳಿರಬಹುದು. ಅವುಗಳನ್ನೆಲ್ಲಾ ವಿವರಿಸುವುದಕ್ಕೆ ಅವುಗಳ ಸಮೀಪಕ್ಕೆ ಹೋದವರೇ ಬೇಕೆಂಬುದು ಸ್ಪಷ್ಟ. ನಾನು (ಲೇಖಕನು) ಆ ಅವಸ್ಥೆಗಿಂತ ಇನ್ನೂ ಬಹಳ ಹಿಂದಕ್ಕೆ ಇರುವೆ-ನಾದುದರಿಂದ ಸುಮ್ಮಸುಮ್ಮನೆ ಆ ವಿಷಯವನ್ನೆತ್ತಿ ಮಾತಿನ ಬರಿ ಬುರುಡೆಯನ್ನು ಬಾರಿಸಲಾರೆನು. ಅರವಿಂದರೇನೋ ಆ ವಿಷಯದಲ್ಲಿ ತಮ್ಮ '**ಯೋಗಸಮನ್ವಯ**' (Synthesis of Yoga)ಯೆಂಬ ಮಹಾಪ್ರಕಾಂಡ ಗ್ರಂಥದ ಕೊನೆಕೊನೆಯ ಪ್ರಕರಣಗಳಲ್ಲಿ ವಿಶದವಾಗಿ ವಿವರಿಸಿರುವದಾದರೂ ಅದರ ಅರ್ಥವು ನನಗೆ ನಿಚ್ಚಳವಾಗಿ ಹೊಳೆದಿಲ್ಲ. ಆದರೂ ಇಲ್ಲಿ ಇಷ್ಟು ಮಾತ್ರ ಹೇಳಬಹುದು; ಅದೇನೆಂದರೆ—

ಆತ್ಮವು ತನ್ನ ಸತ್ಯಸ್ಥಿತಿಯನ್ನು ಮರೆತು ಜೀವದ ಸಂಕ್ಷಿಪ್ತ ದಶೆಗಿಳಿದಿದೆಯೆಂದೂ ಅದು ತಿರುಗಿ ತನ್ನ ಸಾರ್ವಭೌಮಿಕ ಸತ್ತೆಯನ್ನು ಅರಿತು ಸಮ್ರಾಟನಾಗಬೇಕೆಂದೂ ಅರವಿಂದರು 'ಯೌಗಿಕ ಸಾಧನ' ವೆಂಬ ಚಿಕ್ಕ ಗ್ರಂಥದಲ್ಲಿ ಪ್ರತಿಪಾದಿಸಿದುದನ್ನು ನಾವು ಕೂಲಂಕಷ ವಾಗಿ ಪರಿಶೀಲಿಸಿದರೆ ಅವರು ಹೇಳಿದ ಕೊನೆಯ ಮೆಟ್ಟಲಿನ ಬಗೆಗೆ ಊಹಿಸಿಕೊಳ್ಳುವುದಕ್ಕೆ ನಮಗೆ ಎಷ್ಟೋ ಶಕ್ಯವಾಗುವಂತಿದೆ. "**ನಾನೂ ನನ್ನ ತಂದೆಯೂ ಒಂದೇ ಇದ್ದೇವೆ**" ಎಂದು ಕ್ರಿಸ್ತದೇವನಾಡಿದ ಮಾತು ನಮ್ಮ ಕಲ್ಪನೆಯದಾಗದೆ ನಿತ್ಯ ಅನುಭವದ ವಿಷಯವಾಗ ಬೇಕೆಂಬುದೇ ಅರವಿಂದರ ಆ ವಿಜ್ಞಾನಸಮ್ರಾಪ್ತಿಯ ಅವಸ್ಥೆ.

ಇನ್ನು ಹಿಂದಿನ ಪ್ರಕರಣಗಳಲ್ಲಿ ಬಂದ ಯಾತ್ರಿಕನ ಯಾತ್ರಾ ವಿವರಣೆಯಲ್ಲಿ ಮೇಲೆ ಹೇಳಿದ ಸ್ಥಲಗಳ ಕ್ರಮವು ಹೇಗೆ ಯಥಾರ್ಥ ವಾಗಿದೆಯೆಂಬುದನ್ನು ನೋಡುವಾ!

ಯಾತ್ರಿಕನು ತನ್ನ ಬೆನ್ನಮೇಲಿನ ಅನ್ಯಾಯ ಅನೀತಿಗಳ ಹೊರೆಗೆ ಹೇಸಿ ಅದನ್ನು ಇಳಿಸಿಕೊಳ್ಳುವುದಕ್ಕೆಂದು ಕಾತರಿಸಿ ಇಕ್ಕಟ್ಟಾದ ಬಾಗಿ- ಲೊಳಗಿಂದ (ನಿಜಭಕ್ತಿ) ಹಾದು ಮಹಾಶರಣನ ವಧಸ್ತಂಭವನ್ನು ಸಂದರ್ಶಿಸಿದಾಗಲೇ ಬೆನ್ನಮೇಲಿನ ಆ ಭಾರವು ಕಳಚಿ ಹೋಗಲಾಗಿ ದೇವಪುರುಷರಿಂದ ಮನ್ನಿಸಲ್ಪಡುವನು. ಆಗ ಆತನು ಹಿಗ್ಗಿ ಮೂರು ಹಾರಿಕೆ ಜಿಗಿದು ಹಾಡಿದುದು ಹೇಗೆಂದರೆ—

" ...... What a place is this!
must here be the beginning of my bliss?"

"ಆಹಾ! ಇದೆಂಥಾ ಸ್ಥಾನವು!! ಇಲ್ಲಿಗೆ ನನ್ನ
ಆನಂದದ ಆರಂಭವೇನು?"

ಹೌದು, ಇದೇ ಆ 'ಪ್ರಥಮ ಪರಿಚಯ'ವೆಂಬ ಆರಂಭದ ಅನುಭವವು.

ಇದರ ಮುಂದೆ ಕಷ್ಟದ ಗುಡ್ಡವನ್ನು ಹತ್ತಿ ಸುಂದರವಾದ ಅರಮನೆಯೆಂಬ ವಸತಿಸ್ಥಾನಕ್ಕೆ ಮುಟ್ಟ ಅಲ್ಲಿ ವಿವೇಕ, ದೈವಭಕ್ತಿ,

ಔದಾರ್ಯ, ದೂರದರ್ಶಿತ್ವಗಳನ್ನು ಅನುಭವಿಸುವದರಿಂದ ಪೂರ್ವ ಪುರಾತನರ ಧೀರಪೀರತನದ ನೆಲೆಯು ತಿಳಿಯುವುದು. ಅದರಿಂದ ಮುಂದಿನ ಮಹಾಯಾತನೆಯನ್ನು ಸ್ವಾಗತಿಸುವುದಕ್ಕೆ ಸಮರ್ಥನಾಗುವನು. ಇದೇ ಪೂರ್ವರಂಗದ 'ಪ್ರಗಾಢಸ್ಪರ್ಶ'ವೆಂಬ ಎರಡನೆಯ ಅನುಭವವು.

ಇಲ್ಲಿಯಿಂದ ಮುಂದೆ ದೇವನ ಗೋವಳರಾದ ಜ್ಞಾನ, ಅನುಭೂತಿ, ಅಪ್ರಮತ್ತತೆ, ಯಥಾರ್ಥತೆಗಳ ಆಗರವಾದ ರಮ್ಯಗಿರಿಗಳೆಂಬ ಪ್ರದೇಶಕ್ಕೆ ಮುಟ್ಟುವ ಪರಿಯಂತರದ ಕಥೆಯೆಲ್ಲಾ ಮಧ್ಯರಂಗವೇ. ಅದರಲ್ಲಿ ಯಾತನೆ ಮತ್ತು ಹರುಷಗಳು ಒಂದರ ಹಿಂದೊಂದು ಅಲೆಗಳಂತೆ ಏನೇ ಬಂದಿರಲೊಲ್ಲವೇಕೆ. ಆದರೂ ಅವುಗಳೆಲ್ಲಾ ಸೇರಿ ಒಂದೇ ಉಪ ಅವಸ್ಥೆ. ಕೊನೆಗೆ ದೇವನ ಗೋವಳರ ಅತಿಥಿಯಾದಾಗಲೇ ಮೂರನೆಯ ಮಹಾ ಅವಸ್ಥೆ. ಇದರ ಹಿಂದಿನ ಸ್ಥಲದಲ್ಲಿ ಬಂದಿರುವುದು ಸತ್ಯದೃಷ್ಟಿಯಾದರೆ ಈ ಸ್ಥಲದಲ್ಲಿ ಬರುವುದು ದಿವ್ಯದೃಷ್ಟಿಯೆಂದು ಹೇಳಬಹುದು. ಇಲ್ಲಿ ಯಾತ್ರಿಕನು ಬರಿಗಣ್ಣಿಗೆ ಬದಲು ಬೇರೆ ಕಾಜಿನ ಹರಳುಗಳ ಸಹಾಯದಿಂದ ಮಹಾಸ್ವರ್ಗನಗರಿಯನ್ನು ನೋಡುವನು. ಅದರ ಅರ್ಥವು 'ಬೇರೆ ಮತ್ತೊಂದು ದೃಷ್ಟಿ'. ಸತ್ಯದೃಷ್ಟಿಗೆ ಇಂಟುಯಿಶನ್ ಎಂದು ಹೇಳಬಹುದಾದರೆ ಈ ದಿವ್ಯದೃಷ್ಟಿಗೆ ಸಾಯ್ಕೋ ಸ್ಪಿರಿಚ್ಯುಅಲ್ ವ್ಹಿಜನ್ ಎಂದು ಅನ್ನಬಹುದು. ಅಲ್ಲಿ ಯಾತ್ರಿಕನು ತಾನು ಅನುಭವಿಸಿದುದನ್ನೆಲ್ಲ ಹೇಗೆ ಹಾಡಿರುವನೆಂಬುದನ್ನು ನಾವು ಪರ್ಯಾಲೋಚಿಸಿದರೆ ನಮಗೆ ಈ ಮಾತಿನ ಮನವರಿಕೆಯಾಗದಿರದು. ಆ ಹಾಡು ಹೇಗಿದೆಯೆಂದರೆ—

"ಅನ್ಯರೆಲ್ಲರಿಗೆ ಮರೆಯಾಗಿರುವ ರಹಸ್ಯಗಳು (ಯಾತ್ರಿಕರಿಗೆ, ಗೋವಳರಿಂದ ಕರತಲಾಮಲಕವಾಗುವವು. ಆಳವಾದ, ಗುಪ್ತವಾದ, ಗೂಢವಾದ ವಿಷಯಗಳನ್ನು ಅರಿಯಲಪೇಕ್ಷಿಸುವವರು ಇಲ್ಲಿಗೆ ಗೋವಳರ ಹತ್ತರ ಬರಬೇಕು."

ಶಿವಶರಣರು ಪ್ರಾಣಲಿಂಗಿಸ್ಥಲವೆಂದು ಹೇಳಿರುವುದರ ಅನುಭವವು ಇದೇ. ಇದರ ಮುಂದೆ ಶರಣಸ್ಥಲದ ಮಹಾ ಮಾಧುರ್ಯ. ಆಮೇಲೆ ಐಕ್ಯಸ್ಥಲದ ಬ್ರಹ್ಮತೇಜ ಮುಂತಾದವುಗಳೆಲ್ಲಾ ಸೇರಿ ಸಾಧಕಜೀವನದ ಉತ್ತರ ರಂಗವಾಗುವುದು. *

ಯಾತ್ರಿಕನ ಮುಂದಿನ ಪಯಣದ ಅರ್ಥವನ್ನೆಲ್ಲಾ ಅಂಥ ಆ ಉತ್ತರ ಸಾಧಕರೇ ಬಲ್ಲರು. ಆದರೆ ಇಲ್ಲಿ ಸೋಜಿಗಪಡಬೇಕಾದ ಇನ್ನೊಂದು ಸಂಗತಿಯೇನೆಂದರೆ—ಯಾತ್ರಿಕನು ಒಂದು ವಸತಿಗೆ ಬಾದು ಸೇರಿ ಬಳಿಕ ಮುಂದಿನ ಪಯಣಕ್ಕೆ ಸಿದ್ಧನಾದೊಡನೆಯೇ ಅದರ ಮುಂದಿನ ವಸತಿಸ್ಥಲವು ಆತನಿಗೆ ತೋರಿಸಲ್ಪಡುವುದು. ಆ ಮೇಲೆಯೇ ಮುಂದೆ ಪಯಣ. ಇದನ್ನು ನೋಡಿ ನನಗೆ ಅನಿಸುವುದೇನೆಂದರೆ— ಮಾನವನಲ್ಲಿ ನಿಕ್ಷೇಪಿತವಾಗಿರುವ ಬುದ್ಧಿತತ್ವವೆಂಬುದು ತಾನಿರುವ ಅವಸ್ಥೆಗಿಂತ ಮುಂದೆ ಒಂದು ಮೆಟ್ಟಲಿನ ವರೆಗೆ ದೂರದಿಂದಲೇ ನೋಡ ಬಲ್ಲದು. ಅದೊಂದು ಮಾನವನಲ್ಲಿ ದೇವನಿಟ್ಟ ದೀವಿಗೆಯಾಗಿದೆ. ಅದರ ಸಹಾಯದಿಂದ ನಾವು ಮುಂದಡಿಯಿಡಹತ್ತಿದರೆ ಈಗ ನಮಗೆ ಎಷ್ಟೊ ಗೊತ್ತಾಗದ ಮುಂದಿನ ವಿಷಯಗಳು ಮೆಲ್ಲಮೆಲ್ಲನೆ ಗೋಚರಿಸಹತ್ತುವ ವೆಂದಂತಾಗಲಿಲ್ಲವೆ? ತನ್ನ ತಾನರಿತರೆ ತನ್ನ ಅರಿವೇ ಗುರುವಾಗುವು ದೆಂಬ ಮಾತಿನ ಅನುಭವವನ್ನು ನಾವಿಲ್ಲಿ ಮನಗಾಣಬಲ್ಲೆವು.

ಇದೆಲ್ಲಾ ಸರಿ. ಇಷ್ಟೆಲ್ಲ ಆದರೂ ನಮ್ಮ ನಾಯಕನಿಗೆ ಈ ವರುಷದ ಅಂತರ್ನಿರ್ದೇಶವು ಇನ್ನೂ ಬರಲೇ ಇಲ್ಲ. ಆಗಲಿ. ಆತನು ಗೊತ್ತುಪಡಿಸಿದ ತಾರೀಖೂ ಇನ್ನೂ ನಾಳೆಗೆ ಇದೆ.

---

*'ವೀರಶೈವ ಷಟ್‌ಸ್ಥಲ' ಕ್ರಮವು ಹೇಗಿದೆಯೆಂದರೆ—೧. ಭಕ್ತ, ೨. ಮಹೇಶ, ೩. ಪ್ರಸಾದಿ, ೪. ಪ್ರಾಣಲಿಂಗಿ, ೫. ಶರಣ, ೬. ಐಕ್ಯ.

೧೩

ಮರುದಿಸವೂ ಅಂತರ್ನಿರ್ದೇಶವಿಲ್ಲ. ಈ ದಿನವು ಜ್ಯೋತಿರ್ಗಣಿತ ದಿಂದ ಗೊತ್ತುಪಡಿಸಲಾದದ್ದೇನೋ ಸರಿ. ಆದರೆ ಇದೇ ತೀರ ನಿಶ್ಚಿತ ದಿಸವೇನೂ ಅಲ್ಲ. ಸ್ವಲ್ಪ ಹಿಂದೆ ಅಥವಾ ಮುಂದೆ ಸುಮಸುಮಾರಾಗಿ ಈ ತಾರೀಖಿನ ಸಮೀಪದಲ್ಲಿ ಕಾರ್ಯ ನಡೆಯಬೇಕಾದುದೇನೋ ನಿಜ. ಇಂದು ಯಾತ್ರಿಕನ ಪಯಣಗತಿಯ ಎರಡನೆಯ ಭಾಗವನ್ನು ಓದುತ್ತಿದ್ದಾನೆ. ಅದರಲ್ಲಿ ಯಾತ್ರಿಕನ ಮಡದಿಮಕ್ಕಳೂ ನೆರೆಹೊರೆಯವರೂ ಯಾತ್ರೆಗೆ ಹೊರಡುತ್ತಾರೆ. ಯಾಕೆಂದರೆ ಮೊದಲು ಹೊರಟ ಯಾತ್ರಿಯು ತನ್ನ ಇಚ್ಛಿತ ಸ್ಥಾನಕ್ಕೆ ಮುಟ್ಟಿದನೆಂಬ ಸಮಾಚಾರವು ಸರ್ವತ್ರ ಪಸರಿಸಿದ್ದೇ ಇದಕ್ಕೆ ಕಾರಣವು. ತಮ್ಮವನೇ ಒಬ್ಬನು ಆಚೆಯ ದಡಕ್ಕೆ ಸೇರಿದನೆಂಬುದು ಅವರಿಗೆ ಮುಂದುವರಿಯುವುದಕ್ಕೆ ಬಹಳ ಭರವಸವನ್ನು ಹುಟ್ಟಿಸಲಾರದೆ ? ಇವರು ಇಕ್ಕಟ್ಟಿನ ಬಾಗಿಲಲ್ಲಿ ಹಾದು ಆಚೆಯ ರಾಜ್ಯಕ್ಕೆ ಸೇರಿದುದೇ ತಡ, ದೇವಪುರುಷನೊಬ್ಬನು ಇವರಿಗೆ ಕಳುಹಿಸಲಿಕ್ಕೆ ಕೊನೆಯವರೆಗೆ ಸಂಗಡ ಬರುತ್ತಾನೆ. ಆದುದರಿಂದ ಇವರು ಸರ್ವಸಂಕಟಗಳನ್ನೂ ಬಲು ಸುಗಮವಾಗಿ ದಾಟುತ್ತಾರೆ. ಇಷ್ಟು ಮಟ್ಟಿಗೆ ಮಾತ್ರ ನಾನಿಲ್ಲಿ ಕಥಾರಹಸ್ಯವನ್ನು ಸೂಚಿಸಿಬಿಡುವೆನೇ ಹೊರತು ಇಡೀ ಕಥೆಯನ್ನು ಹೇಳಿ ವಾಚಕರನ್ನು ಬೇಸರಗೊಳಿಸಲಾರೆನು.

ಒಟ್ಟಿಗೆ ಈ ಪುಸ್ತಕವು ನಮ್ಮ ನಾಯಕನಿಗೆ ಒಳ್ಳೇ ವಿಸ್ಮಯವನ್ನು ಹುಟ್ಟಿಸಿಬಿಟ್ಟಿತು. ಈ ವರುಷದ ಅಂತರ್ನಿರ್ದೇಶಕ್ಕೆ ಕಾರಣವಾಗಲಿರುವ ಪುಸ್ತಕವು ಇದೇ ಎಂದು ತೀರಾ ಸ್ಪಷ್ಟವಾಗಿ ಅನಿಸಹತ್ತಿತು. ಅಂತೂ ಹೀಗೆ ನಿಶ್ಚಿತ ತಾರೀಖು ಸರಿದು ಹೋಯಿತು. ಆದರ ಮರು ದಿನ (ಡಿಸೆಂಬರ್ ೨೮), ಮುಂಜಾನೆ ಎಂಟುಗಂಟೆಯ ಸುಮಾರಿಗೆ ಯಾವ ಕಾರಣದಿಂದಲೋ ಒಳಗೆ ವಿಶೇಷ ಸ್ಫೂರ್ತಿ ಹೆಚ್ಚಾಗಿ ನಮ್ಮ ನಾಯಕನು ತನ್ನ ಗೆಳೆಯನ ಕೂಡ ಹೀಗೆ ಮಾತನಾಡುತ್ತಿದ್ದಾನೆ—

"ಈ ವರುಷದ ಅಂತರ್ನಿರ್ದೇಶಕ್ಕೆ ಇದೇ ಪುಸ್ತಕವೇ ನಿಶ್ಚಯವಾಗಿ ಕಾರಣವಾಗುತ್ತದೆ. ಹೋದ ವರುಷ ಮಹಾರಾಷ್ಟ್ರದ ಅನುಭಾವ ಸರಣಿಯನ್ನು ನೋಡಿ ನಾನು ವಿಸ್ಮಯಪಟ್ಟು ಅಂತರ್ನಿರ್ದೇಶಕ್ಕೆ ಮುಟ್ಟಿದಾಗ ಒಂದು ಮಾತು ನನ್ನ ಅಂತಃಕರಣಕ್ಕೆ ಅನಿಸುತ್ತಿದ್ದಿತು. ಅದೇನೆಂದರೆ—'ಎಲಾ, ಸತ್ಯದ ಮುಖಗಳೆಷ್ಟು! ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಅನುಭಾವಿಗಳಿಗೆ ಬೇರೆ ಬೇರೆ ಪ್ರಕಾರಗಳಿಂದ ಆ ದಿವ್ಯಸತ್ಯವು ಗೋಚರಿಸುತ್ತ ಬಂದಿದೆಯಲ್ಲ! ನನಗೆ ಮುಂದಿನ ವರುಷದ ಅಂತರ್ನಿರ್ದೇಶದ ಕಾಲಕ್ಕೆ ಇನ್ನಾವ ನಾಡಿನ, ಮತ್ತಾವ ಕಾಲದ, ಬೇರಾವ ಬಗೆಯ ಅನುಭಾವ ಗ್ರಂಥವು ಕೈಗೆ ಬೀಳುವದೋ ನೋಡಬೇಕು!' ಒಂದು ವರುಷದ ಹಿಂದಿನ ಮಾತು ಈಗ ನನಗೆ ಕ್ಷಣಕ್ಷಣಕ್ಕೆ ನೆನಪಿಗೆ ಬರುತ್ತಾ ಇದೆ. ಈ ಸಾರೆಯ ಗ್ರಂಥವು ನನಗೆ ಬಹಳೇ ವಿಸ್ಮಯವನ್ನು ಹುಟ್ಟಿಸಿದೆ. ಇನ್ನೂ ಇಂಥವುಗಳು ಜಗತ್ತಿನಲ್ಲಿ ಎಷ್ಟಿವೆಯೋ ಯಾರು ಬಲ್ಲರು! ಹೀಗೆಲ್ಲಾ ವಿಚಾರ ಮಾಡಿದಂತೆ ನನಗೆ ಮತ್ತೂ ಮತ್ತೂ ಹೆಚ್ಚಿಗೆ ಆಶ್ಚರ್ಯವಾಗುತ್ತದೆ."

ಹೀಗೆ ಮಾತಾಡಿ ಈತನು ತನ್ನ ಓದುವ ಕೆಲಸಕ್ಕೂ ಆ ಗೆಳೆಯನು ತನ್ನ ವ್ಯವಹಾರ ವಿಷಯಕ್ಕೂ ಹೊರಳಿದರು. ಜ್ಞಾನಭಿಕ್ಷುವು ಒಂದೆಡೆಗೆ ಓದುತ್ತ ಕುಳಿತಿದ್ದಾನೆ. ಅಲ್ಲೇ ಅವನಿಗೆ ಹೊಂದಿ ತೀರ ಸಮೀಪದಲ್ಲಿ ಗೆಳೆಯನೂ ಆತನ ಸಹ ವ್ಯವಸಾಯಿಗಳೂ ತಮ್ಮ ಕಾಗದಪತ್ರಗಳನ್ನು

ನೋಡುತ್ತಾ ಬಳಿಯಲ್ಲೇ ಕುಳಿತಿದ್ದಾರೆ. ಆಗ ನಮ್ಮ ನಾಯಕನ ಅಂತರಂಗದಲ್ಲಿ ಒಂದು ಬಗೆಯ ಅಲೌಕಿಕ ಸ್ಪಂದನಗಳು ಎದ್ದದ್ದರಿಂದ ಅವನ ಮೈಯ್ಯೆಲ್ಲಾ ಕಂಪಿಸುತ್ತಿದೆ; ಕೊರಳ ನಿರಗಳೆಲ್ಲಾ ಬಿಗಿದು ಕೊಂಡಿವೆ; ಏನೋ ಒಂದು ಬಗೆಯ ವಿಲಕ್ಷಣವು ನಡೆಯುಬಟ್ಟಿದೆ. ಈತನ ಈ ಅವಸ್ಥೆಯ ಕಡೆಗೆ ಅವರಾರದೂ ಲಕ್ಷ್ಯವೇ ಇಲ್ಲ. ಇಷ್ಟೇ ಅಲ್ಲ. ನಮ್ಮ ನಾಯಕನಿಗೂ ಕೂಡ–ಹೀಗೆ ಏನೇನೋ ನಡೆದು ಎಷ್ಟು ಹೊತ್ತಾಯಿತೆಂಬುದು ಗೊತ್ತೇ ಇಲ್ಲ. ಓದುತ್ತಿದ್ದ ಹಾಗೆ ಹತ್ತೆಂಟು ಸಾರೆ ಒಂದೇ ವಾಕ್ಯವನ್ನು ತಿರುತಿರುಗಿ ಅದನ್ನೇ ತಾನೋದುತ್ತಿದ್ದೇನೆಂಬುದು ಆಕಸ್ಮಾತ್ತಾಗಿ ಲಕ್ಷ್ಯಕ್ಕೆ ಬರಲು–ಇದೇನು ನಡೆದಿದೆಯೆಂದು ತನ್ನೊಳಗೆ ತಾನು ಹೊರಳಿ ನೋಡಿಕೊಂಡನು! ಆಗ ಆನಂದವು ಮಹಾಪೂರವಾಗಿ ಪ್ರವಹಿಸುತ್ತಿದೆಯೆಂದು ಗೊತ್ತಾಯಿತು! ಆ ಹರ್ಷಾತಿರೇಕದಿಂದ ಚಿತ್ತವು ಪುಸ್ತಕದ ಮೇಲಿಂದ ಹೊರಳಿಬಿಟ್ಟಿದೆ! ಹೊರಗೆ ಕಣ್ಣು ಗಳೇನೋ ಅಕ್ಷರಗಳನ್ನು ಹಾಗೇ ನೋಡುತ್ತಲೇ ಇವೆ, ನಾಲಿಗೆಯೂ ಹಾಗೇ ಯದ್ವಾತದ್ವಾ ಉಚ್ಚರಿಸುತ್ತಲೇ ಇದೆ. ಆದರೆ ಚಿತ್ತವು ತೀರ ಒಳಗೆ ಸೇರಿಕೊಂಡಿರುವುದರಿಂದ ಇವೆರಡರ ಶ್ರಮವೆಲ್ಲಾ ಹೀಗೆ ವ್ಯರ್ಥ ವಾಗುತ್ತಾ ಇದೆ. ಚಿತ್ತದ ಆಶ್ರಯವು ತಪ್ಪಿದ್ದರಿಂದಲೇ ಕಣ್ಣುನಾಲಿಗೆ ಗಳು ಹಾಗೆ ಒಂಟಿ ವಾಕ್ಯದೊಡನೆ ಹತ್ತೆಂಟು ಸಾರೆ ಗುದ್ದಾಡಿದ ವೆಂದು ಈಗ ನಮ್ಮ ನಾಯಕನಿಗೆ ಗೊತ್ತಾಯಿತು.

ಆಗ ಗುರುತಿಗೆಂದು ಪುಸ್ತಕದ ಅದೇ ಪುಟವನ್ನು ತೆರೆದು ಎದೆಯ ಮೇಲಿಟ್ಟುಕೊಂಡು ಬಿದ್ದುಕೊಂಡುಬಿಟ್ಟನು. ಮೆಲ್ಲನೆ ಕಣ್ಣು ತೆರೆದು ಹಾಗೇ ಗಡಿಯಾರವನ್ನು ನೋಡಿದರೆ ಮುಂಜಾವಿನ ಒಂಬತ್ತು ಗಂಟೆಯ ಮೇಲೆ ಐವತ್ತು ನಿಮಿಷ ಗತಿಸಿದ್ದವು. ತುಸು ಹೊತ್ತು ಹಾಗೇ ಕಣ್ಣುಮುಚ್ಚಿ ಬಿದ್ದುಕೊಂಡನು. ಇಷ್ಟೆಲ್ಲಾ ನಡೆದರೂ ಹೊಂದಿ ಕುಳಿ ತಿದ್ದವರಾರದೂ ಇತ್ತ ಲಕ್ಷ್ಯವೇ ಇಲ್ಲ. ತುಸು ಹೊತ್ತಿನ ಮೇಲೆ ಕಣ್ದೆರದು ಎದ್ದು ಕುಳಿತು ತನ್ನ ಗೆಳೆಯನನ್ನು ಸಂಬೋಧಿಸಿ—'ಈ ವರುಷದ ಅಂತರ್ನಿರ್ದೇಶವು ಬಂದು ಹೋಯಿತು!' ಎಂದು ನುಡಿದನು!

ಕೂಡಲೆ ಅಲ್ಲಿದ್ದವರಿಗೆಲ್ಲಾ ಆಶ್ಚರ್ಯವಾಯಿತು. 'ಎಲಾ! ನಾವೆಲ್ಲಾ ಇಲ್ಲೇ ಇದ್ದರೂ ಇಷ್ಟೊತ್ತಿನವರೆಗೂ ಇತ್ತ ಹೊರಳಿ ನೋಡದೆ ಇದ್ದದ್ದು ಇದೇನು ವಿಚಿತ್ರ!!' ಎಂದು ಗೆಳೆಯನು ಉದ್ಗಾರ ತೆಗೆದನು. ಆಗ ನಮ್ಮ ನಾಯಕನ ಲಕ್ಷ್ಯವು ಹೇಗೋ ಪುನಃ ಗಡಿಯಾರದ ಕಡೆಗೆ ಹೋಯಿತು. ಅದರಲ್ಲಿ ಒಂಬತ್ತರ ಮೇಲೆ ಐವತ್ತೈದು ಮಿನೀಟಾಗಿದೆ. ಮತ್ತೊಂದು ಸ್ವಲ್ಪ ಹೊತ್ತಿನ ಅನಂತರ ನೋಡಿದಾಗಲೂ ಅಷ್ಟೇ. ಆಗ ಆತನು—'ಇದೇನು ಅಷ್ಟಕ್ಕೇ ನಿಂತುಕೊಂಡು ಬಿಟ್ಟಿತೋ ಏನು!' ಎಂದು ಬಗೆದು ಗೆಳೆಯನಿಗೆ ನೋಡ ಹೇಳಿದನು. ಆತನು ಅದಕ್ಕೆ ಕಿವಿಹಚ್ಚಿ ನೋಡಿದಾಗ ಅದರ 'ಕಟ್ ಕಟ್' ಸಪ್ಪಳೆಲ್ಲಾ ನಿಂತುಹೋದದ್ದೇ ನಿಜವೆಂದು ಗೊತ್ತಾಯಿತು! ಅಂದು ದೇವನ ದೀಪದ ವಾಕ್ಯಬಂದಾಗ ತಲೆಯ ಮೇಲೆ ವಿದ್ಯುದ್ದೀಪ ಹೊತ್ತಿದ್ದೂ ಇಂದು ಅಂತರ್ನಿರ್ದೇಶ ಬಂದಾಗ ಕಾಲಸೂಚಕ ಯಂತ್ರವು ನಿಂತಲ್ಲೇ ನಿಂತು ಕೊಂಡು ತನ್ನ ಸಮ್ಮತಿಯನ್ನು ಸೂಚಿಸಿದ್ದೂ ನಮ್ಮ ನಾಯಕನಿಗೆ ಬಹಳೇ ಅಚ್ಚರಿಯನ್ನುಂಟು ಮಾಡಿದವು!

"ಈಶಾನುಗ್ರಹವೊಂದನ್ನೇ ಆಶ್ರಯಿಸಿದರೆ ಸಾಕು, ತಕ್ಕ ಕಾಲಕ್ಕೆ ಅಧ್ಯಾತ್ಮಸಿದ್ಧಿಯು ಬಂದೇ ಬರುವದು. ಸಾಧಕನು ಸರ್ವ ಆಲೋಚನೆಗಳನ್ನೆಲ್ಲಾ ಬಿಟ್ಟುಗೊಟ್ಟು ಮಹಾ ಯಾತ್ರಿಯ 'ಲೈಫ್! ಲೈಫ್!! ಇಟರ್ನಲ್ ಲೈಫ್!!!—ಜೀವನ, ಜೀವನ, ನಿತ್ಯಜೀವನ!' ಎಂಬ ಮಹಾ ವಾಕ್ಯವೊಂದನ್ನು ಸದಾ ನೆನಪಿನಲ್ಲಿಟ್ಟರೆ ಸಾಕು. ಇನ್ನುಳಿದ ಯಾವ ಕೃತ್ರಿಮ ಸಾಧನೆಗೀಧನೆಗಳ ಅಗತ್ಯವಿಲ್ಲ" ಯಾರಾರು ತಮ್ಮ ಮಾನವ ಶಕ್ತಿಯನ್ನು ನಂಬಿ ಜ್ಞಾನಸಾಧನೆಯಿಂದಾಗಲಿ ನೀತಿಸಾಧನೆಯಿಂದಾಗಲಿ, ನಿಯಮ-ನಿಷ್ಠೆಯಿಂದಾಗಲಿ ಪ್ರಯತ್ನ ಮಾಡುವರೊ ಅವರ ಹೆಜ್ಜೆ ಶಾಶ್ವತ ಹಾದಿಯಲ್ಲಿ ಬಹು ಆಯಾಸದಿಂದ ಮುಂದೆ ಬೀಳುವದು. ಆದರೆ ಆತ್ಮವು ತನ್ನ ಅಹಂಕಾರ ಹಾಗು ಕರ್ಮಕಲಾಪವನ್ನು ದೇವನಿಗೆ ನಿವೇದಿಸುತ್ತಲೆ ಪರಮಾತ್ಮನೆ ನಮ್ಮ ಭಾರವನ್ನು ತಾನು ಹೊರುವನು. ಅಜ್ಞಾನಿಗೆ ಜ್ಞಾನದ ಬೆಳಕು ಕೊಡುವನು; ಅಶಕ್ತನಿಗೆ

ದಿವ್ಯ ಸಂಕಲ್ಪಶಕ್ತಿಯನ್ನು ದಯಪಾಲಿಸುವನು; ಪಾಪಿಗೆ ದಿವ್ಯ ಶುದ್ಧಿಯ ಮುಕ್ತಾವಸ್ಥೆಯನ್ನು ನೀಡುವನು; ದುಃಖಕೊಟ್ಟವನಿಗೆ ಅಪಾರವಾದ ಆತ್ಮಿಕ ಪ್ರಹರ್ಷವನ್ನೂ ಆನಂದವನ್ನು ಈಯುವನು.'' ಎಂಬ ಭಾವವು ಅಂತರಂಗದಲ್ಲಿ ಘನಘನವಾಗಿ ಗರ್ಜಿಸುತ್ತಲಿದೆ. ಇಲ್ಲಿಗೆ ನಮ್ಮ ನಾಯಕನ ಆತ್ಮವು ಸರ್ವಸಮರ್ಪಣದ ಮಹಾಸ್ವರೂಪವನ್ನು ತುಂಬಾ ಕಂಡುಕೊಂಡಿತು.

ಇನ್ನುಮುಂದೆ ತನ್ನ ಪೂರ್ಣತೆಗೆ ವಿಶ್ರಾಂತಿಯ ಹೊರತು ಮತ್ತೇನೂ ಅಗತ್ಯವಿಲ್ಲವೆಂದೂ, ಅದನ್ನು ದೊರಕಿಸಿಕೊಳ್ಳುವ ಸಲುವಾಗಿ ಮಡದಿ ಮಕ್ಕಳ ಆಲೋಚನೆಯನ್ನು ತುಂಬಾ ಗೆಳೆಯರ ಕೊರಳಿಗೇ ಹಾಕಿಬಿಟ್ಟರಾಯಿತೆಂದೂ ನಿರ್ಧರಿಸಿಕೊಂಡನು. ಇನ್ನು ವಿಶ್ರಾಂತಿಯನ್ನು ಪಡೆಯುವುದಕ್ಕೆ ತಕ್ಕ ಸ್ಥಾನವಾವುದೆಂಬ ಪ್ರಶ್ನೆ. ಆಯಿತು—ಮೊದಲೇ ಗೊತ್ತುಪಡಿಸಿಟ್ಟುಕೊಂಡಿದ್ದ ಮೇರೆಗೆ ಪಾಂಡಿಚೇರಿಯೇ ಒಳ್ಳೆಯದೆಂದನು. ಆದರೆ ಈತನಿಗೆ ಅಲ್ಲಿ ಆಶ್ರಯವು ಸಿಕ್ಕುವದೋ ಇಲ್ಲವೋ, ಎಂಬುದು ಸಂಶಯದ ಮಾತಾಗಿದ್ದಿತು. ಯಾಕೆಂದರೆ ಈತನಿಗೆ ದೈಹಿಕ ಅಶಕ್ತತೆಯ ಜೊತೆಗೆ ಆಂಗ್ಲ ಭಾಷೆಯ ವ್ಯವಹಾರಗೊತ್ತಿಲ್ಲದುದೂ ಒಂದು ಮಹತ್ತರವಾದ ಕೊರತೆಯಾಗಿದ್ದಿತು. ಹಣದ ವಿಷಯವನ್ನು ಯಾರಾದರೂ ಗೆಳೆಯರು ಹೇಗಾದರೂ ನೋಡಿಕೊಳ್ಳಬಹುದಾಗಿದ್ದಿತಾದರೂ ಈ ಬೇರೆಯೆರಡು ಕೊರತೆಗಳಬಗೆಗೆ ಇನ್ನಾರ ಉಪಾಯವೂ ನಡೆಯುವಂತಿಲ್ಲ. ಆದರೂ ಇದ್ದ ಸಂಗತಿಯನ್ನೆಲ್ಲಾ ನಿವೇದಿಸಿ ಪಾಂಡೀಚೇರಿಯ ಅರವಿಂದಾಶ್ರಮದ ವ್ಯವಸ್ಥಾಪಕರಿಗೊಂದು ಪತ್ರವನ್ನು ಬರೆದದ್ದಾಯಿತು.

ಇಂದು ಇಡೀ ದಿನವೆಲ್ಲಾ ನಮ್ಮ ನಾಯಕನು ಇಂದಿನ ಘಟನೆಯನೇ ಕುರಿತು ಆಲೋಚಿಸುತ್ತಿದ್ದಾನೆ. ಪ್ರತಿವರುಷವೂ ಅಂತನಿರ್ದೇಶ ಬರುವ ದಿವಸ ಮುಂಜಾನೆ—ಮುಗಿಲೂ, ಸೂರ್ಯನೂ, ಪೃಥ್ವಿಯೂ ಒಂದು ವಿಶೇಷತೆರನಾಗಿ ಕಾಣಿಸುತ್ತಿದ್ದುದಾಗಿ ಆತನ ನಿರೀಕ್ಷಣಕ್ಕೆ ಬಂದ ಮಾತಾಗಿದ್ದಿತು. ಈ ದಿನ ಬೆಳಗಿಗೆ ಹಾಗೆಲ್ಲಾ ನಡೆದೇ ಇದ್ದಿತೆಂದು

ಈಗ ಆತನ ನೆನಪಿಗೆ ಬರುತ್ತಾ ಇದೆ. ಬೆಚ್ಚ ಬೆಳಗು ಮರಮುಳಿ ಹೊಡೆದು, ಹೊತ್ತು ಹೊರಡುವ ವೇಳೆಗೆ ಮೋಡವೆಲ್ಲಾ ಬಯಲಾಗಿ ಮುಗಿಲು ಪರಿಷ್ಕಾರವಾಗಿದ್ದರೆ, ಆಗಿನ ಸೂರ್ಯೋದಯವು ಹೇಗೆ ಕಾಣಿಸುವುದೆಂಬುದನ್ನು ಯಾರಾದರೂ ಲಕ್ಷ್ಯಗೊಟ್ಟು ನೋಡಿರುವಿರೇನು? ಆಗ ನೆಲವೆಲ್ಲಾ ತೊಯ್ದು ಕಪ್ಪಾಗಿರುವುದರಿಂದ ನಮ್ಮ ಕಣ್ಣಿಗೆ ಅದು ಭೂಮಿತಾಯಿಯು ಎರಕೊಂಡ ಕಪ್ಪುಕೂದಲಿನ ಪ್ರಶಾಂತ ರಮಣೀಯತೆಯನ್ನು ಬೀರುತ್ತಿರುತ್ತದೆ. ಮರಗಳ ಎಲೆಗಳೆಲ್ಲಾ ತೊಳೆದು ಹಸನಾಗಿದ್ದುದಲ್ಲದೆ ಅವುಗಳ ಮೇಲೆ ಸೀರಿಸ ತುಂತುರು ಅಲ್ಪ ಸ್ವಲ್ಪವಾಗಿ ಇನ್ನೂ ಉಳಿದಿರುವದರಿಂದ ಅವುಗಳ ಮೇಲೆ ಬಿದ್ದ ಸೂರ್ಯ ಕಿರಣಗಳದೊಂದು ವೈಭವವೇ ಕಂಗೊಳಿಸುತ್ತಿರುತ್ತದೆ. ಹವೆಯಲ್ಲಿ ಆರ್ದ್ರತೆಯು ತುಂಬಿಕೊಂಡಿರುವದರಿಂದಲೂ ತಿಳಿ ಮುಗಿಲು ತೀರ ನಿರ್ಮಲವಾಗಿರುವದರಿಂದಲೂ ಸೂರ್ಯನ ಮಹಾ ಪ್ರಭೆಗೆ ಒಂದು ಬಗೆಯ ಮಾಧುರ್ಯವು ಲೇಪವಾದಂತಾಗಿರುತ್ತದೆ. ಇದನ್ನು ನೀವು ಎಂದಾದರೂ ನೋಡಿದ್ದರೆ ಇಂದಿನ ನಮ್ಮ ನಾಯಕನ ಬೆಳಗಿನ ವಿಷಯವು ನಿಮಗೆ ಸ್ವಲ್ಪ ಕಲ್ಪನೆಗೆ ಬಾರದಿರದು. ಅಂತರ್ನಿರ್ದೇಶ ಬರುವ ದಿವಸ ಆತನ ಕಣ್ಣಿಗೆ ಏನಿಲ್ಲದೆ ಎಂತಿಲ್ಲದೆ ಸಮಸ್ತಸೃಷ್ಟಿಯು ಹೀಗೆ ಸೊಬಗುಳ್ಳದ್ದಾಗಿ ತೋರುತ್ತಿರುತ್ತದೆ. ಹೊರಗಿನ ಸೃಷ್ಟಿಯಲ್ಲಿ ಮೇಲೆ ಹೇಳಿದಂತೆ ಮಳೆಯಾಗಲಿ ಮುಗಿಲಿನ ನೈರ್ಮಲ್ಯವಾಗಲಿ ಏನೇನೂ ಇಲ್ಲದೆಯೂ ಒಳಗಿನ ಯಾವದೋ ಒಂದು ಕಾರಣದಿಂದ ಆ ಹೊತ್ತು ಆತನಿಗೆ ಅದು ಅಷ್ಟೊಂದು ರಮ್ಯವಾಗಿಯೂ ಅಗಾಧವಾಗಿಯೂ ತೋರುತ್ತಿರುತ್ತದೆ. ಸೂರ್ಯನ ಪ್ರಭೆಯನ್ನು ನೋಡಿ—'ಆಹಾ! ಇದು ನನ್ನ ತಂದೆಯ ಅಂಗಕಾಂತಿ!!' ಎಂದೆನ್ನುತ್ತ ಒಳಗೊಳಗೇ ಏನೋ ಒಂದು ಬಗೆಯ ರುಚಿ ನೋಡಿದವನಂತೆ ಕಣ್ಣು ಮಿಕಿ ಮಿಕಿ ಮಾಡುವನು. ಆತನ ಅಂತರಂಗದ ಚಿದಾಕಾಶದಲ್ಲಿ ಅಂದು ಒಳಗೊಳಗೇ ಏನೇನೋ ಹೀಗೆ ಅರಿಯದ ಘಟನೆಗಳು ನಡೆಯುತ್ತಿರುತ್ತವೆ. ಅದರ ಮೂಲಕವಾಗಿಯೇ ಅಂದಿನ ಅಂತರ್ನಿರ್ದೇಶವು ಅಂತರಂಗದ ಕನ್ನಡಿಯಲ್ಲಿ ಪಡಿಮೂಡುವದು!

ಬೆಳಗಿನ ಎಂಟು ಗಂಟೆಯ ಸುಮಾರಿಗೆ ಏನೋ ಒಂದು ಸ್ಫೂರ್ತಿ ಬಂದು ಆತನು ತನ್ನ ಗೆಳೆಯನೊಡನೆ ಮಾತನಾಡುತ್ತಿದ್ದನೆಂದು ಹಿಂದೆ ಹೇಳಿದೆಯಲ್ಲವೆ? ಆ ಸ್ಫೂರ್ತಿಯ ಕಾರಣವು ಈಗ ವಿವರಿಸಿದ್ದೇ ಎಂದು ಆತನಿಗೆ ಈಗೀಗ ಮಾತ್ರ ಲಕ್ಷ್ಯಕ್ಕೆ ಬಂತು. ಇನ್ನು ಅಂತರ್ನಿರ್ದೇಶ ಬಂದ ಸಮಯದಲ್ಲಿ ತಾನೋದುತ್ತಿದ್ದ ಗ್ರಂಥದಲ್ಲಿ ಅಂಥಾದ್ದೇನು ಮಹತ್ವದ ವಿಷಯವು ಬಂದಿದ್ದಿತೋ ನೋಡೋಣವೆಂದು ಈಗ ಆತನು ಆ ಪುಸ್ತಕವನ್ನು ತೆರೆದು ನೋಡುತ್ತಿದ್ದಾನೆ. ಕೇವಲ ಆ ಕ್ಷಣದಲ್ಲಿ ಹತ್ತೆಂಟು ಸಾರೆ ತೊಳಲಿಸಿದ ಆ ಒಂದು ವಾಕ್ಯವನ್ನು ಮೊದಲಿಗೆ ಓದಿ ನೋಡಿದನು. ಅದು ಹೀಗಿದ್ದಿತು—

"ಮಹಾ ಯಾತ್ರಿಯ ವಂಶವು ಸಮಸ್ತ ಪ್ರದೇಶವನ್ನೆಲ್ಲ ವ್ಯಾಪಿಸ ಬೇಕಾದೆ; ಭೂಮಿಯ ಮೇಲೆಲ್ಲಾ ಅದು ಹೆಚ್ಚಬೇಕಾಗಿದೆ."

ಈ ವಾಕ್ಯವು ಒಂದೇನೋ ಆಶೀರ್ವಾದದ ಸ್ವರೂಪದ್ದಾಗಿದೆ ಯಾದರೂ ಬರೇ ಇದಿಷ್ಟೇ ತನ್ನ ಒಳಬಾಗಿಲು ತೆರೆಯುವುದಕ್ಕೆ ಸಾಕಾ ಗಿರಲಾರದೆಂದು ಬಗೆದು ಅದರ ಹಿಂದಿನ ಪುಟಗಳನ್ನು ಒಂದೊಂದಾಗಿಯೇ ತೆಗೆತೆಗೆದು ಓದಿ ನೋಡಹತ್ತಿದನು. ಐದಾರು ಪುಟಗಳ ಆಚೆಯಲ್ಲಿ ಒಂದು ಉಪಕಥೆ ಮುಗಿದಿದ್ದಿತು. ಆ ಕಥೆಯನ್ನೋದುತ್ತಿದ್ದಾಗಲೇ ತನ್ನ ಅಂತರಂಗದ ಕಪಾಟವು ತೆರೆದಿರಲಿಕ್ಕೆಬೇಕೆಂದು ತರ್ಕಿಸಿದನು. ಯಾಕೆಂದರೆ ಆ ಕಥೆಯು ತನ್ನಂತಹದೇ ಒಂದು ವ್ಯಕ್ತಿಯ ಆತ್ಮಸಿದ್ಧಿಯ ವಿಷಯದಲ್ಲಿ ಹೇಳಿದುದಾಗಿದ್ದಿತು.

ಅದನ್ನೋದುತ್ತಿದ್ದಾಗಲೇ ಅಂತರಂಗದಲ್ಲಿ ಹೊಸ ಸ್ಫುರಣವು ಮೈದಾಳಿದ್ದಿತಾದರೂ ಮುಂದೆ ಐದಾರು ಪುಟಗಳು ದಾಟಿ ಹೋಗುವ ವರೆಗೂ ತನಗೆ ಏನೇನೂ ಗೊತ್ತೇ ಆಗಿರಲಿಲ್ಲವಲ್ಲಾ! ಎಂದು ಈಗ ಆತ್ಯಾಶ್ಚರ್ಯಭರಿತನಾದನು. ಆ ಹೊತ್ತಿಗೆ ಆ ಕಥೆಯು ಲಕ್ಷದಲ್ಲಿಲ್ಲ, ಅದರ ಮುಂದಿನ ಐದಾರು ಪುಟಗಳು ದಾಟಿದುದರ ಸ್ಮರಣವೂ ಇಲ್ಲ. ಬರೇ ಕೊನೆಗೊಂದು ವಾಕ್ಯದ ಮೇಲೆ ಕಣ್ಣುನಾಲಿಗೆಗಳು ಕಾಲುಜಾರಿ ಬಿದ್ದು ಹೊರಳಾಡುತ್ತಿರುವುದೊಂದು ಮಾತ್ರವೇ ಗೊತ್ತಾದದ್ದು.

ಇರಲಿ. ಅಷ್ಟೊಂದು ಮೈಮರೆಸಿದ ಆ ಕಥೆಯನ್ನೊಂದಿಷ್ಟು ಹೇಳಿ ಈ ಪ್ರಕರಣವನ್ನು ಮುಗಿಸುವೆನು.

ಅದು ಆಧ್ಯಾತ್ಮರಾಜ್ಯದಲ್ಲಿ ಅಡಿಯಿಟ್ಟ ಒಬ್ಬ ಪುಕ್ಕ ಮನುಷ್ಯನ ಕಥೆಯು. ( Story of Mr. Fearing ) ಅವನು ಬಲು ಅಧೀರನು ಅವನ ನಡತೆಯೆಲ್ಲಾ ನಮ್ಮ ನಾಯಕನಿಗೆ ತುಂಬಾ ಸರಿಹೊಂದುತ್ತದೆ. ಮಹಾ ಯಾತ್ರಿಯ ಮಡದಿಮಕ್ಕಳ ಪರಿಸೆಯಲ್ಲಿ ಅವರ ಜೊತೆಗೆ ಕಳುಹಿಸಬಂದ ದೇವಪುರುಷನು ಭಯವಂತನೆಂಬ ಆ ಭೀರುಭಕ್ತನ ಕಥೆಯನ್ನು ಹೇಳುತ್ತಾನೆ. ಅದು ಹೇಗೆಂದರೆ—

" ಭಯವಂತನೆಂಬ ಒಬ್ಬ ಯಾತ್ರಿಯೊಡನೆ ನಾನು ನನ್ನ ಒಡೆಯನಾದ ಅರ್ಥಗಾರನ ಮನೆಯಿಂದ ಕೊನೆಗೆ ಸ್ವರ್ಗನಗರಿಯವರೆಗೂ ಹೊಲಬಿಗನಾಗಿ ಜೊತೆಯಲ್ಲಿದ್ದೆನು. ಅವನಲ್ಲಿ ಶುದ್ಧಭಕ್ತಿಯು ಮೂಲವಿದ್ದಿತಾದರೂ ಇವನ ಹಾಗೆ ಅಂಜುಬುರುಕರನ್ನು ನಾನು ಎಲ್ಲಿಯೂ ಕಂಡವನಲ್ಲ. ' ನಾನು ದಿವ್ಯನಗರಿಗೆ ಹೋಗಿ ಮುಟ್ಟುತ್ತೇನೋ ಇಲ್ಲವೊ ! ' ಎಂದು ಆತನು ಯಾವಾಗಲೂ ಸಂದೇಹಪಡುತ್ತಿದ್ದನು. ಅಲ್ಪ ವಿಶ್ವಾಸಿಗಳು ಏನಾದರೂ ಮಾತಾಡಿದ್ದು ಅವನ ಕಿವಿಗೆ ಬಿದ್ದರೆ ತೀರಿತು. ' ಅಯ್ಯೋ ! ನಾನು ಇಂಥಾ ಬಲೆಯೊಳಗಿಂದ ಹೇಗೆ ಪಾರಾಗಿ ನನ್ನ ಇಚ್ಛಿತ ಸ್ಥಲಕ್ಕೆ ಮುಟ್ಟೇನು ! ' ಎಂದು ಹೆದರುವನು. ಅಧೈರ್ಯದ ಹುದುಲಿನಲ್ಲಿ ತಿಂಗಳುಗಟ್ಟಲೆ ಬಿದ್ದುಕೊಂಡಿದ್ದನು. ಇನ್ನೊಬ್ಬರು ಅದೇ ಹಾದಿಯಿಂದ ಹಾದು ದಾಟಿ ಪಾರಾಗುತ್ತಿದ್ದುದನ್ನು ಕಣ್ಣಾರೆ ಕಂಡರೂ ಕೂಡ ತಾನು ಎದ್ದು ಮುಂದಡಿಯಿಡಲಿಕ್ಕೆ ಧೈರ್ಯಪಡುತ್ತಿದ್ದಿಲ್ಲ. ಕೊನೆಗೆ ಒಂದು ತಿಂಗಳಾದ ಮೇಲೆ ಒಂದು ದಿನ ಹೇಗೋ ಧೈರ್ಯ ಮಾಡಿ ಎದ್ದು ಹುದಿಲು ದಾಟಿ ಆಚೆಯ ದಡವನ್ನು ಸೇರಿದನು. ಹಾಗೆ ದಾಟಿದ ಮೇಲೆಯೂ ಕೂಡ ' ಅಯ್ಯೋ ! ನಾನು ದಾಟಿದ್ದು ನಿಜವೋ ಅಲ್ಲವೋ ?! ' ಎಂದು ಸಂಶಯಪಡುತ್ತಿದ್ದನು.

" ಹಾಗೆಯೇ ಅವನು ಇಕ್ಕಟ್ಟಿನ ಬಾಗಿಲಿಗೆ ಬಂದನು. ಅಲ್ಲಿ ಬಾಗಿಲು ತಟ್ಟುವುದಕ್ಕೆ ಹೆದರಿ ಹಾಗೇ ಹೊರಗೇ ನಿಂತುಕೊಂಡನು.

ತನಗಿಂತ ಹಿಂದಿನಿಂದ ಬಂದವರೆಲ್ಲಾ ಕದಾ ತಟ್ಟಿ ಒಳಗೆ ಹೋದರೂ ಕೂಡ ತಾನು ಧೈರ್ಯವಿಲ್ಲದೆ ಇನ್ನೂ ಹೊರಗೇ ನಿಂತುಕೊಂಡು ಬಿಡುತ್ತಿದ್ದನು. ಕೊನೆಗೊಂದು ದಿನ ಹೇಗೋ ಮೆಲ್ಲಗೆ ಬಾಗಿಲು ತಟ್ಟಿದನು. ಒಳಗಿನ ದ್ವಾರಪಾಲಕನು ಧಡಕ್ಕನೆ ಕದಾ ತೆರೆದೊಡನೆ ಈತನು ಬೆಚ್ಚಿ ನೆಲಕ್ಕೇ ಬಿದ್ದುಬಿಟ್ಟನು. ಆದರೆ ಆ ಕರುಣಾಳುವಾದ ದೇವರಾಳು ತಾನೇ ಆತನನ್ನು ಒಳಕ್ಕೆ ಕರೆದುಕೊಂಡು ಸಂತೈಸಿದನು.

" ಅಲ್ಲಿಯಿಂದ ಅವನು ನಮ್ಮ ಒಡೆಯನಾದ ಅರ್ಥಗಾರನ ಮನೆಗೆ ಬಂದನು. ಅಲ್ಲಿಯೂ ಅದೇ ಹಾಡು. ' ಒಳಗಿನವರನ್ನು ಹೇಗೆ ಕರೆಯಲಿ ? ' ಎಂದು ಹೆದರಿ, ಹಗಲಿನ ಬಿಸಿಲು ಇರುಳಿನ ಚಳಿ ಏನೊಂದನ್ನೂ ಲೆಕ್ಕಿಸದೆ ಹಾಗೇ ಹೊರಗೇ ನಿಂತುಕೊಂಡುಬಿಟ್ಟಿದ್ದನು. ನಾನು ಕಿಡಕಿಯೊಳಗಿಂದ ಹೇಗೋ ಒಮ್ಮೆ ಹೊರಗೆ ಹಣಿಕೆ ಹಾಕಿದಾಗ ಈತನ ಪುಕ್ಕತನದಿಂದ ಮುದುಡಿದ ಮೋರೆ ನನಗೆ ಕಾಣಿಸಲು ಕರುಣಪಟ್ಟು ಹೊರಗೆಬಂದು ಅವನನ್ನು ಕರೆದು ಚೆಲ್ಲವರಿದರೂ ಒಳಗೆ ಬರಲಿಕ್ಕೆ ಧೈರ್ಯವನ್ನು ತಂದುಕೊಳ್ಳಲಿಲ್ಲ. ಕಣ್ಣುತುಂಬ ನೀರುತಂದು ಮಿಕಿಮಿಕಿ ನೋಡುತ್ತಿದ್ದನು. ಪರಿಪರಿಯಿಂದ ನಾನು ಹೇಳಿದಾಗ ಏನೋ ಒಮ್ಮೆ ಒಳಗೆ ಅಡಿಯಿಟ್ಟನು. ನಮ್ಮ ಒಡೆಯನು ಇಂಥವರ ಬಗೆಗೆ ಬಹಳೇ ಕರುಣೆ ತೋರಿಸುವವನು.

" ಅಲ್ಲಿಂದ ಮುಂದೆ ನನ್ನನ್ನು ಅವನ ಜೊತೆಗಾರನಾಗಿ ಕಳುಹಿಸಿದ್ದರಿಂದ ಇಬ್ಬರೂ ಕೂಡಿ ಹಾದೀ ಹಿಡಿದೆವು. ನಾನು ಮುಂದೆ; ಆತ ಹಿಂದೆ ಹಿಂದೆ. ದಾರಿಯಲ್ಲಿ ಮೇಲಿಂದಮೇಲೆ ನಿಟ್ಟುಸಿರು ಬಿಡುತ್ತಿದ್ದನೇ ಹೊರತು ನನ್ನ ಸಂಗಡ ಒಂದು ಮಾತನ್ನೂ ಆಡುವವನಲ್ಲ. ಮುಂದೆ ಮಹಾ ಶರಣನ ವಧಸ್ತಂಭವನ್ನು ಕಂಡಾಗ ಒಂದಿಷ್ಟು ತುಟಿ ಅಲುಗಿಸಿ ಮುಗುಳುನಗೆ ನಕ್ಕನು.

" ಮುಂದೆ ಕಷ್ಟದ ಗುಡ್ಡದ ಮಗ್ಗುಲಿಗೆ ಬಂದು ಮುಟ್ಟಿದೆವು. ಅಲ್ಲಿ ಮಾತ್ರ ಅವನು ಎಳ್ಳಷ್ಟೂ ಹಿಂದುಮುಂದು ಬಗೆಯದೆ ನೆಟ್ಟಗೆ ಮುನ್ನೋಡಿ ಅದನ್ನೇರಿದನು. ಅವನಿಗೆ ಅಲ್ಲಿ ಎಳ್ಳಷ್ಟೂ ದಣಿವಾಗಲಿಲ್ಲ.

ಮುಂದೆ ದಾರಿಯಲ್ಲಿ ಸಿಂಹಗಳು ಕಟ್ಟಿದಲ್ಲಿಗೆ ಬಂದಾಗ ಅವುಗಳಿಗೂ ಹೆದರಲಿಲ್ಲ. ಆದರೆ ಕಡೆಗೆ ತನ್ನ ಗತಿ ಏನಾಗುವದೋ ಎಂಬ ಶಂಕೆ ಮಾತ್ರ ಒಳಗೊಳಗೆ ಇದ್ದೇ ಇದ್ದಿತು.

"ಬಳಿಕ ನಾವು ಸುಂದರಾಲಯಕ್ಕೆ ತಲುಪಿದೆವು. ಅಲ್ಲಿಯೂ ಒಳಗೆ ಅಡಿಯಿಡುವುದಕ್ಕೆ ಅಳುಕುತ್ತಲೇ ಇದ್ದನು. ಆದರೆ ನಾನು ಕೈಹಿಡಿದು ಒಳಗೆ ಕರೆದೊಯ್ದು ಅಲ್ಲಿರುವ ಕುಮಾರಿಕೆಯರ ಭೆಟ್ಟಿಯನ್ನು ಮಾಡಿಸಿದೆನು. ಅಲ್ಲಿಯೂ ನಾಲ್ವರೊಳಗೆ ಅವನನ್ನು ಕರೆದೊಯ್ಯುವ ದೆಂದರೆ ನಾಯಿಯನ್ನು ದಬ್ಬಿ ಸೀರಿಗೆ ನೂಕಿದಂತಾಗುತ್ತಿದ್ದಿತು. ಆದರೆ ಏಕಾಂತದಲ್ಲಿ ಭಕ್ತಿಪರವಾದ ಸಲ್ಲಾಪ ಮಾಡುವದಕ್ಕೂ ಕೇಳುವುದಕ್ಕೂ ಅವನು ಸಂತಸಪಡುವನು. ಪುರಾತನ ವೃತ್ತಾಂತಗಳನ್ನು ಕೇಳಿ ಅಂತ ರಂಗದಲ್ಲಿ ಮನನ ಮಾಡುವುದಕ್ಕೆ ಅವನು ಕುತೂಹಲಪಡುತ್ತಿದ್ದನು.

"ಮುಂದೆ ನಾವು ಅಲ್ಲಿಯಿಂದ ಹೊರಟು ದುಮ್ಮಾನದ ತಗ್ಗಿಗೆ ಬಂದೆವು. ಅಲ್ಲಿ ಅವನು ತುಂಬಾ ಸುಖವಾಗಿ ದಾರಿಯನ್ನು ನಡೆದುದನ್ನು ನೋಡಿ ನನಗೆ ಬಹಳ ಸೋಜಿಗವಾಯಿತು! ಅಲ್ಲಿ ಅವನು ನೆಲದ ಮೇಲೆ ಮಲಗುವನು, ಅದನ್ನು ಮುದ್ದಿಸುವನು, ತಬ್ಬುವನು! ಹೂವು ಕಂಡರೆ ಮೂಸುವನು! ಇಷ್ಟು ಸೊಬಗಿನಿಂದ ಅಲ್ಲಿ ಅವನು ದಾರೀ ನಡೆದನು.

"ಆದರೆ ಇನ್ನು ಮುಂದೆ ಅಂಧಂತಮಸ್ಸಿನ ತಗ್ಗಿಗೆ ಬಂದಾಗ ಮಾತ್ರ ಈತನು ನಿಸ್ತರಿಸಲಾರನೆಂದು ನಾನು ಮೊದಲೇ ಆಲೋಚಿಸಿದ್ದೆನು. ಅಲ್ಲಿಯ ನರಳಾಟ, ಹುಯಿಲು, ಅಳಲು ಮುಂತಾದ ಗೋಳಾಟವನ್ನೆಲ್ಲಾ ಕೇಳಿ 'ಅಯ್ಯೋ! ನಾನು ತಾಳಲಾರೆನು! ಈ ಭೂತಪ್ರೇತಗಳು ನನ್ನನ್ನು ಉಳಿಸಲಾರವಯ್ಯೋ!' ಎಂದು ಹಲುಬುತ್ತಲೇ ಇದ್ದನು. ಧೈರ್ಯಹೇಳಿಹೇಳಿ ನನಗೆ ಸಾಕಾಗಿ ಹೋಯಿತು. ಆದರೆ ನಮ್ಮ ನಾಡಿನ ಮಹಾಪ್ರಭುವು ಈತನ ಕಾತರಸ್ವಭಾವವನ್ನರಿತು ಈತನನ್ನು ಬಹಳವಾಗಿ ಹೆದರಿಸಬಾರದೆಂದು ಅಂಧಂತಮಸ್ಸಿನಲ್ಲಿ ಎಡೆಯಾಡುವ ಭೂತಗಣಂಗಳಿಗೆ ಆಜ್ಞೆಯನ್ನು ವಿಧಿಸಿದ್ದನು. ಆ ಪ್ರಾಂತದಲ್ಲಿ ನಾನು ಅನೇಕ

ಯಾತ್ರಿಕರೊಡನೆ ಅನೇಕಸಾರೆ ಹೋಗಿಬಂದವನು. ಆದರೆ ಇಷ್ಟು ಶಾಂತವಾಗಿ ಆ ತಗ್ಗು ಎಂದೂ ಇದ್ದಂತೆ ನಾನು ಕಂಡಿಲ್ಲ.

"ಇನ್ನೂ ಎಲ್ಲಾ ಪೂರ್ವೋತ್ತರಗಳನ್ನು ಹೇಳುತ್ತ ನಡೆದರೆ ಕೇಳುವವರು ಬೇಸತ್ತಾರು. ಆದರೂ ಕೆಲವು ಸಂಗತಿಗಳನ್ನು ಹೇಳದೆ ಇರಲಾರೆನು. ಮಾಯಾಪುರದ ಸಂತೆಗೆ ಬಂದಾಗ ಅಲ್ಲಿ ಇದುರಿಸು ವವರನ್ನೆಲ್ಲ ಈತನು ಪ್ರತಿಯಾಗಿ ಇದುರಿಸಿಯೋ ಬಿಡುತ್ತಿದ್ದನು. ಒಳ್ಳೆಯದೇ ಆಯಿತೆಂದೆನು. ಮುಂದೆ ಎಲ್ಲಾ ಮುಗಿಸಿಕೊಂಡು ಕೊನೆ ಕೊನೆಗೆ ಹಾಗೇ ಮುಂದೆ ನಡೆದು ಮಹೇಂದ್ರಜಾಲದ ಭೂಮಿಗೆ ಬಂದೆವು. ಅಲ್ಲಿ ಅವನಿಗೆ ಎಳ್ಳಷ್ಟೂ ತೂಕಡಿಕೆ ಬರಲಿಲ್ಲ.

"ಕೊಟ್ಟಕೊನೆಗೆ ಮರಣನದಿಗೆ ಬಂದೆವು. ಅಲ್ಲಿ ಆತನು 'ಅಯ್ಯೋ!' ಎಂದನು. ಯಾಕೆಂದರೆ ಹೊಳೆಯಲ್ಲಿ ಹಾಯುವಾಗ ನಡುವೇ ಮುಳುಗಿಹೋದರೆ ಮಹಾಪ್ರಭುವಿನ ದರ್ಶನವು ಅಷ್ಟಕ್ಕೇ ತಪ್ಪಿ ಹೋಗುವದಲ್ಲಾ! ಎಂದು ಆತನು ಎದೆಗುದಿಪಡುತ್ತಿದ್ದನು. ಆದರೆ ಇಲ್ಲಿಯೂ ನಾನು ಒಂದು ಆಶ್ಚರ್ಯವನ್ನು ಕಂಡೆನು. ನೀರಿನ ಆಳವು ಅವನ ಮಟ್ಟೆಗೆ ಕಾಲು ಹೊಳೆಯಾಗಿ ಬಿಟ್ಟಿದ್ದಿತಯ್ಯಾ! ಹೀಗಾ ದುದನ್ನು ನಾನೀವರೆಗೆ ಎಂದೂ ಕಂಡಿರಲಿಲ್ಲ!!

"ಹೊಳೆದಾಟಿ ಆಚೆಗೆ ಸೇರುತ್ತಲೇ, ಮಹಾನಗರಿಯ ಪ್ರಭಾ ಮಯವಾದ ಮಹಾದ್ವಾರವು ಕಾಣಿಸಿತು! ಅದನ್ನು ಅವನಿಗೆ ತೋರಿಸಿ— 'ಅಯ್ಯಾ, ಇನ್ನು ನೀನೇ ಬೇಕಾದ ಹಾಗೆ ಒಳಗೆ ಹೋಗು, ಇಂದಿಗೆ ನೀನು ಪರಮಧನ್ಯನಾದಿ!' ಎಂದು ಹೇಳಿ ಅವನನ್ನು ಅತ್ತ ಕಳುಹಿಸಿ ನಾನು ತಿರುಗಿ ಹಿಂದಕ್ಕೆ ಹೊರಟೆನು."

"ಹೇಗಾದರೂ ಕೊನೆಗೆ ದೇವಾನುಗ್ರಹದಿಂದ ಆತನ ಕಲ್ಯಾಣ ವಾಯಿತು! ಅವನಿಗೆ ಹಾಗೆ ಕಲ್ಯಾಣವಾಗುವದರಲ್ಲಿ ನನಗೇನೂ ಸಂದೇಹ ವಿದ್ದಿರಲಿಲ್ಲ. ಯಾಕೆಂದರೆ ಅವನು ಸಹನಶೀಲನು; ಅನ್ಯಾಯ ಅನೀತಿ ಗಳಿಗೆ ಹೆದರುವವನು; ಪರರ ಕೇಡಿಗೆ ಹವಣಿಸದವನು; ತನಗೆ ನ್ಯಾಯವಾಗಿ

ಬರತಕ್ಕದ್ದಿದ್ದರೂ ಹೆರವರ ಮನಸ್ಸನ್ನು ನೋಯಿಸಿ ಒಂದು ಕವಡೆ ಯನ್ನಾದರೂ ತೆಗೆದುಕೊಳ್ಳಲಾರದವನು; ಬೇಕಾದರೆ ತಾನೇ ಉಪವಾಸ ಬಿದ್ದಾನು–ಆದರೆ ಅನ್ಯರಿಗೆ ತೊಂದರೆ ಪಡಿಸಲಾರನು. ಅವನು ಇಂಥವ ನೆಂತಲೇ ಕೊನೆಗೆ ಮಹಾ ಸೌಭಾಗ್ಯವು ಅವನಿಗೆ ಕೈಸೇರಿಬಿಟ್ಟಿತು ! ''

ದೇವಪುರುಷನು ಹೀಗೆ ಭಯವಂತನ ಕಥೆಯನ್ನು ಹೇಳಿದುದನ್ನು ಕೇಳುತ್ತಿದ್ದ ಪರಿಸೆಯವರಲ್ಲೊಬ್ಬನು ಹೀಗೆಂದನು—

**'' ಅಯ್ಯೊ, ಈತನ ಕಥೆಯನ್ನು ಕೇಳಿದ್ದರಿಂದ ನನಗೆ ಬಹಳ ಪ್ರಯೋಜನವಾಯಿತು ! ನನ್ನಂಥ ಅಧೀರರು ಯಾರೂ ಇಲ್ಲವೆಂದೇ ತಿಳಿದಿದ್ದೆನು ! ಆದರೆ ಈಗ–ನನ್ನ ವಿದ್ಯಮಾನ ಅವನ ವಿದ್ಯಮಾನ ಸಮವೆಂದರಿತು ಭರವಸವುಳ್ಳವ ನಾದೆನು ! ''**



೧೪

"ತನ್ನ ಮಾನವಶಕ್ತಿಯು ತನಗೆ ಸಾಲದೆಂದು ಆತನಿಗೆ ತಿಳಿಯಿತು. ಮತ್ತು ದೇವತಾಶಕ್ತಿಯ ಆವಶ್ಯಕತೆಯು ಆತನಿಗೆ ತೋರಿತು." ಎಂದು ಪಾಲ್ ರಿಚರ್ಡ್‌ರು ಅರವಿಂದರ ಒಂದು ಕಾಲದ ಅವಸ್ಥೆಯನ್ನು ಕುರಿತು ಬಣ್ಣಿಸಿದಂತೆ ಈ ಕೆಲವರುಷಗಳಿಂದ ನಮ್ಮ ನಾಯಕನ ಸ್ಥಿತಿಯಾಗಿದೆಯಷ್ಟೆ? ಇದೀಗ ಆತನು ದೇವದೇವನಲ್ಲಿ ಪ್ರಾರ್ಥಿಸುತ್ತಿರುವುದು 'ಕಷ್ಟನಷ್ಟ ತರಬೇಡ'ವೆಂದಲ್ಲ. ಆದರೆ 'ತಾಳಿಕೊಳ್ಳುವ ಶಕ್ತಿಯನ್ನು ಕೊಡು' ಎಂದು.

ಆತನಿಗೀಗ ಕೆಲದಿನಗಳವುಟ್ಟಿಗೆ ವಿಶ್ರಾಂತಿ ಸಿಕ್ಕರೆ ಆ ಶಕ್ತಿಗೆ ಒಳಗಿನಿಂದ ಪುಟಿಯಲಿಕ್ಕೆ ಶಕ್ಯವಾಗುತ್ತಿದೆಯೆಂದು ಆತನಿಗೆ ತೋರುತ್ತಲಿದೆಯಲ್ಲವೆ? ಹಾಗಾದರೆ ಎಲ್ಲಿಯೋ ಹೋಗಿ ವಿಶ್ರಾಂತಿಯನ್ನು ಹೊಂದಬೇಕೆನ್ನುವವನಿಗೆ ತಾನಿದ್ದಲ್ಲಿ ಅಂತಹದೇನು ಉಪಟಳವಿದೆ? ಎಂಬ ಪ್ರಶ್ನವು ಸ್ವಾಭಾವಿಕವಾಗಿದೆ.

ಮುಖ್ಯವಾದ ತೊಂದರೆಯೆಂದರೆ ಮನೆಯಲ್ಲಿ ತಾಯಿಯೊಡನೆ ತಾಳಮೇಳು ಇಲ್ಲದ್ದೇ. ಎರಡನೆಯದು ಸಮಾಜಕ್ಕೂ ತನಗೂ ಇರುವ ವೈಪರೀತ್ಯ.

ಹೊರಗಿನ ಪರಿಸ್ಥಿತಿಯೇನೋ ಹೀಗಿದೆಯಾದರೂ ನಮ್ಮ ನಾಯಕನಲ್ಲಿ ಮಜ್ಜಾಗತವಾಗಿಬಿಟ್ಟಿರುವ ಬಹುದಿನದ ಒಂದು ಒಳನಿಶ್ಚಯವೇನೆಂದರೆ—"ತನ್ನ ಗುರಿಯು ಐಕ್ಯವೇ ಹೊರತು ವಿಚ್ಛೇದವಲ್ಲ. ಮೊದಲು

ಸತಿಯಗೂಡ ಐಕ್ಯವನ್ನು ಸಾಧಿಸಬೇಕು. ಯಾಕೆಂದರೆ ಅದು ಸಾಧಿಸ ಲಾರದುದಕ್ಕೇ ಸಾಮಾನ್ಯವಾಗಿ ಸಾಧಕರು ಬೈರಾಗಿಯಾಗಲೆಳಸು ತ್ತಾರೆ. ಆಮೇಲೆ ಮನೆಯವರೆಲ್ಲರೊಡನೆ ಐಕ್ಯ ಬೇಕು. ಇಷ್ಟಾದರೆ ಮನೆಯನ್ನು ತೊರೆದು ಮಠದ ಲೋಭಕ್ಕೆ ಬೀಳುವ ಕಾರಣವು ತಾನಾಗಿ ತಪ್ಪುತ್ತದೆ. ಬಳಿಕ ಸರ್ವ ಜನತೆಯೊಡನೆ ಐಕ್ಯ, ಅದನ್ನು ಬಿಟ್ಟರೆ ಈತನ ಸರ್ವಸಿದ್ಧಿಗಳೆಲ್ಲಾ ಕಾನನದ ಬೆಳದಿಂಗಳಂತೆ ವ್ಯರ್ಥವಾದವುಗಳೇ ಸರಿ. ಇಷ್ಟೆಲ್ಲಕ್ಕೂ ಮೇಲೆ ಸಮಾನಶೀಲತೆಯ ಗೆಳೆಯರೊಡನೆ ಐಕ್ಯ ದಿಂದಿರಬೇಕೆಂದು ಕಲಿಸಿಕೊಡುವುದಕ್ಕೇ ಕಾರಣವಿಲ್ಲ. ಯಾಕೆಂದರೆ ಶೀಲಸಾಮ್ಯತೆಯ ಮೂಲಕ ಸಾಮರಸ್ಯವಿಲ್ಲಿ ಸಹಜವಾಗಿಯೇ ಎಷ್ಟೋ ಮಟ್ಟಿಗೆ ಇರುತ್ತಿರುವುದು. ಈ ಗೆಳೆಯರ ಬಳಗವೇ ಲೋಕದಲ್ಲಿ ಸಾಧ ಕರ ಸಿದ್ಧಿಯ ಪರಿಣಾಮವನ್ನು ಪಸರಿಸುವುದಕ್ಕೆ ಬೇಕಾಗುವ ಮಹಾ ಮಂತ್ರ. ಒಟ್ಟಾರೆ ಸತಿ, ಕುಟುಂಬ, ಸಂಘ, ಸಮಾಜ ಇವುಗಳಲ್ಲಿಯೇ ನಮ್ಮ ಜೀವನ ಸಾಫಲ್ಯಕ್ಕೆ ಇಂಬು ದೊರೆಯಬೇಕಲ್ಲದೆ ಆರಣ್ಯದ ಗಿರಿ ಗಂಹರಗಳಲ್ಲಿ ಅಲ್ಲ.''

ಇದೇನೋ ಬಹಳ ದೊಡ್ಡ ತುತ್ತು. ಉಂಡೇನೆಂಬ ಆಶೆಯೇನೋ ನಮ್ಮ ನಾಯಕನಲ್ಲಿ ಬಲವಾಗಿ ಇದೆ. ಆದರೆ ಅದನ್ನು ಮೆಲ್ಲುವುದಕ್ಕೆ ಬಾಯಿಯಿನ್ನೂ ತಕ್ಕಷ್ಟು ವಿಸ್ತಾರವಾಗಿಲ್ಲ. ಆದುದರಿಂದಲೇ ಕೆಲ ಕಾಲದ ಮಟ್ಟಿಗಾದರೂ ಈ ಸರ್ವ ಜಂಜಾಲದಿಂದ ದೂರ ಸರಿದು ತನ್ನ ಒಳಶಕ್ತಿಗೆ ಬೆಳೆದು ಬಲಪಡುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಡ ಲೆಳೆಸುತ್ತಿದ್ದಾನೆ.

ಇತ್ತ ಅರವಿಂದರ ಆಶ್ರಮಕ್ಕೆ ಬರೆದ ಪತ್ರಕ್ಕೆ ಉತ್ತರವೇ ಬರಲಿಲ್ಲ. ಆದದ್ದಾಗಲಿಯೆಂದು ಹಾಗೇ ಒಪ್ಪಿಗೆಯನ್ನು ಪಡೆದುಕೊಳ್ಳದೆ ಹೊರಟೇಬಿಟ್ಟೇನೆಂದರೆ ಅದಕ್ಕೆ ತಕ್ಕ ಬಲವು ತನ್ನಲ್ಲಿಲ್ಲ. ಗೊತ್ತಿನ ಮೇಲೆ ಹೆಜ್ಜೆಯಿಟ್ಟಲ್ಲದೆ ಈಗ ಗತಿಯಿಲ್ಲ. ಕಣ್ಣುಮುಚ್ಚಿ 'ಜಯ್ ಭಗವಾನ್' ಎಂದು ಹೆಜ್ಜೆಯನ್ನು ಕಿತ್ತಿ ಇಡುವಷ್ಟು ಆತ್ಮವಿಶ್ವಾಸವೇ ಒಳಗೆ ಬರಲೊಲ್ಲದು. ಎಳ್ಳಷ್ಟೂ ಕಷ್ಟ ತಾಳಲಿಕ್ಕಾಗದ ಸ್ಥಿತಿಯಲ್ಲಿ

ಹಾಗೆ ಹೊರಟು ಗತಿಗಾಣುವ ಆಶೆ ಹಿಡಿಯುವುದು ಬಹಳ ಬಿಗಿಯಾದ ಕೆಲಸ. ಹಿಂದಿರುಗಲಿಕ್ಕೂ ಆಗದೆ ಮುಂದುವರಿಯಲಿಕ್ಕೂ ಆಗದೆ ಹಾದಿಯ ಹೆಣವಾದೇನಲ್ಲಾ ! ಎಂದು ಒಳಹೆದರಿಕೆ. ಹೀಗೆಂದರೆ ಇಲ್ಲಿ ಮರಣ ಭಯವೆಂದು ಅರ್ಥವಲ್ಲ. ಆದರೆ ಬರಲಿರುವ ಕಷ್ಟನಷ್ಟದ ಕಂಗಾಲಸ್ಥಿತಿಯನ್ನು ಕಲ್ಪಿಸಿ ಹೀಗೆ ಬಳಲುವುದು.

ಆಯಿತು. ಇಷ್ಟರಲ್ಲಿ ಊರೊಳಗೆ ಪ್ಲೇಗಿನ ಹಾವಳಿ. ಆದುದರಿಂದ ಅಡವಿಯಲ್ಲಿ ಮಡದಿಮಕ್ಕಳನ್ನು ಒಮ್ಮೆಲೇ ಬಿಟ್ಟು ಎಲ್ಲಿಗೋ ಹೊರಡು ವುದು ತೀರಾ ಅಶಕ್ಯವೆಂದೆನಿಸಿತು. ಆಗಲಿ ಒಂದು ತಿಂಗಳವರೆಗಾದರೂ ಅವರೊಡನೆ ಇದ್ದು ಮುಂದೆ ಅವರದೆಲ್ಲ ಸರಿಯಾಗಿ ಮೆಟ್ಟಿಗೆಯಾದ ಬಳಿಕ ಮುಂದಿನ ಆಲೋಚನೆಯನ್ನು ಮಾಡೋಣ, ಎಂದುಕೊಂಡನು.

ಮತ್ತೆ ಮಾವಿನ ತೋಪಿನಲ್ಲಿ ವಸತಿ. ಗೆಳೆಯರೆಲ್ಲರ ಗುಡಿಸಿಲು ಗಳು ಅಲ್ಲಿಯೆ. ಉಳಿದವರಾರ ಸುಳಿವೂ ಅಲ್ಲಿ ಇಲ್ಲ. ನಮ್ಮ ನಾಯಕನ ತಾಯಿಯು ತನ್ನ ಅಕ್ಕರತೆಯ ಕಮತದ ಒಡ್ಡೋಲಗದೊಡನೆ ಬೇರೆ ಒಂದು ಹೊಲದಲ್ಲಿ. ಅಲ್ಲಿ ಊರ್ದೊಳಗಿನ ಇನ್ನಿತರ ಜನರ ಗುಡಿಸಲು ಗಳೂ ಎಷ್ಟೋ ನೆರೆದಿದ್ದುವು.

ಈಗ ಇವರ ಸಂಸಾರದ ಚಮತ್ಕಾರವು ಹೇಗಿದೆಯೆಂದರೆ— 'ತಾಯಿಯೊಡನೆ ತಿರುತಿರುಗಿ ಕಲಹಮಾಡುತ್ತ ಕೂಡುವುದು ತಪ್ಪಿಂದಾ ಗದ ಮಾತು' ಎಂದು ಜ್ಞಾನಭಿಕ್ಷುವು ಈಗ ವಿಶೇಷವಾಗಿ ಆ ಗೊಡ ವೆಗೇ ಹೋಗುವುದಿಲ್ಲ. ಆದುದರಿಂದ ಪುನಃ ಹೊಲಗಳ ಕಾರಭಾರ ವೆಲ್ಲಾ ತಾಯಿಯ ಕಡೆಗೆ; ಮನೆಯ ಭಾರವೆಲ್ಲಾ ಮಡದಿಯ ಮೇಲೆ; ಮಕ್ಕಳ ಹೊರೆಯು ಮಂಜುಳನ ಹೆಗಲು, ತಲೆ, ಬೆನ್ನು, ಕಂಕುಳಗಳೆಲ್ಲ ವುಗಳ ಮೇಲೆ. ಅದರಲ್ಲಿಯೂ ತಾಯಿಯು, 'ಇಲ್ಲದ ಮಲವುಗಳು ಇವರ ಮೇಲೆ ಬೀಳಲಿ, ಅದರಲ್ಲಿ ಇವರು ಒದ್ದಾಡಲಿ, ಅದರ ಮೂಲಕ ತಿರುಗಿ ನನಗೆ ಶರಣು ಬರಲಿ' ಎಂಬ ವಿಚಾರದಲ್ಲಿ ಮಗ್ನಳು. ಆದರಿಂದ 'ಜಮೆ'ಯ ಕಾಲಮ್ ತಾಯಿಯ ಪಾಲಿಗೆ, 'ಖರ್ಚ'ನ ಕಾಲಮ್ ಮಡದಿಯ ಕೊರಳಿಗೆ, ಏನೂ ತಿಳಿಯದಂತಾಗಿ ಮಂಕುಹಿಡಿದು ಕುಳಿತು

ಕೊಳ್ಳುವುದು ನಮ್ಮ ನಾಯಕನ ಪಾಲಿಗೆ. ಇದೆಲ್ಲ ನೋಡಿ ಕರುಳು ಕರಗಿ ಧನವಿಲ್ಲದ ಸುಧಾಮನಾದರೂ–ತನುಮನಗಳನ್ನು ಶಕ್ತಿಮೀರಿ ಇವರ ಸಲುವಾಗಿ ಸವೆಯಿಸುವುದು ಮಂಜುಳನ ಮಹಾಯಜ್ಞ. ಇತ್ತ ಇನ್ನೂ ಸಾಲದ ಹೊರೆಯು ಬೇರೆ!!!

ಇದನ್ನೆಲ್ಲಾ ನೋಡಿ ಸಹಿಸಲಾರದಂತಾಗಲು ನಮ್ಮ ನಾಯಕನು– 'ಅಯ್ಯೋ, ಈ ತಾಯಿ ಎಂದು ಸತ್ತಾಳು!' ಎಂದುಕೊಳ್ಳುವನು. ಕೂಡಲೇ ಅವನ ಅಂತರಾತ್ಮನು— 'ಎಲಾ! ಅವಳು ಸತ್ತರೆ ಮುಂದೆ ನೀನೇಸುದಿನ ಬದುಕಲಿರುವಿ?!' ಎಂದು ಆತನನ್ನು ಹೀಯಾಳಿಸುವನು. ಆಗ ಅವನು ನಾಚಿಕೆಪಟ್ಟು— 'ತಂದೇ, ಅವಳಿಗೆ ಬುದ್ಧಿಯನ್ನಾದರೂ ಕೊಡು!' ಎಂದು ಪ್ರಾರ್ಥಿಸುವನು. ಒಟ್ಟಾರೆ ಆಗ ಇಷ್ಟೊಂದು ಗೋಳಾಟ ನಡೆಯುತ್ತಿದ್ದಿತು.

ಇಂತಹ ಸಂತಾಪದಲ್ಲಿ— ಆಕೆ ಎಂದಿಗಾದರೂ ಒಮ್ಮೊಮ್ಮೆ ಇವರಿದ್ದ ವಸತಿಗೆ ಬಂದರೆ ಅಂದು ಇಡೀ ಗೆಳೆಯರ ಬಳಗದಲ್ಲೆಲ್ಲಾ ಅಸಂತೋಷವು ಹಬ್ಬುವಂತೆ ಅಲ್ಲದ ಸಲ್ಲದ ಮಾತುಗಳ ಮಳೆಯನ್ನೇ ಸುರಿಸಿಬಿಡುವವಳು. ಅದರ ಪರಿಣಾಮವು ಒಮ್ಮೆ ಎಲ್ಲಿಯು ತನಕ ಬಂತೆಂದರೆ— ನಮ್ಮ ನಾಯಕನು ಅವಳೊಡನೆ ಮಾತನಾಡುವುದನ್ನೇ ತುಂಬಾ ಬಿಟ್ಟುಗೊಟ್ಟನಲ್ಲದೆ 'ಇನ್ನು ಮುಂದೆ ನಮಗೂ ನಿನಗೂ ಕೂಡಿ ನಡೆಯಲಾರದು. ಆದುದರಿಂದ ನಿನಗೆ ಬೇಕೆಂದಿನಿಸುವ ಒಂದು ಹೊಲವನ್ನು ತೆಗೆದುಕೊಂಡು ನಮ್ಮ ಗೊಡವೆಗೆ ಬಾರದೆ ಬೇಕಾದಲ್ಲಿ ಇರು' ಎಂಬ ಆಶಯವನ್ನು ಪ್ರಕಟಿಸಿದನು. ಆಗಲೂ ಅಂತರಾತ್ಮನು ಒಳಗೆ ಒಂದೇಸವನೆ— 'ನಿರ್ವೈರಃ ಸರ್ವಭೂತೇಷು!– Love your enemies!' ಎಂದು ಘಂಟಾಘೋಷವಾಗಿ ಇವನನ್ನು ಎಚ್ಚರಿಸುತ್ತಿದ್ದನು! ಆಗ ಆತನು ತನಗೆ ಎರಡು ದೆವ್ವಗಳು ಒಡಕೊಂಡಿರುವವೆಂದು ಭಾವಿಸಿ ಒಳಗೊಳಗೇ ನಗುತ್ತಿದ್ದನು. ಆ ದೆವ್ವಗಳೆಂದರೆ ಒಂದು ಅಂತರಾತ್ಮ, ಇನ್ನೊಂದು ಸಂತಪ್ತವಾದ ಜೀವ.

"ಗಜೋ ಹ್ಯಾಕರ್ಷತೇ ತೀರಂ
ಗ್ರಾಹಶ್ಯಾಕರ್ಷತೇ ಜಲಂ ॥
ತಯೋರ್ಯುದ್ಧಂ ಮಹಾಘೋರಂ
ದಿವ್ಯ ವರ್ಷ ಸಹಸ್ರಕಂ ॥"

"ಆನೆ ದಡದ ಕಡೆಗೆ ಎಳೆಯುತ್ತಿದೆ, ಮೊಸಳೆ ನಡುನೀರಿಗೆ ಸೆಳೆಯುತ್ತಿದೆ. ಸಾವಿರ ದಿವ್ಯ ವರುಷಗಳ ಕಾಲದಿಂದಲೂ ಅವುಗಳ ಘನಘೋರ ಕಾಳಗವು ನಡೆದೇ ಇದೆ" ಎಂದು ಮಹಾಭಾರತದ ಗಜೇಂದ್ರ ಮೋಕ್ಷೋಪಾಖ್ಯಾನದಲ್ಲಿ ವರ್ಣಿಸಿರುವುದರ ಅನುಭವವೆಂದು ನಮ್ಮ ನಾಯಕನಿಗೆ ತುಂಬಾ ಬಂತು.

"ಈತನೇನೋ ಹೀಗೇ ಮಾಡುತ್ತಿರುತ್ತಾನೆ." ಎಂದು ಭಾವಿಸಿಕೊಂಡು ಆತನ ತಾಯಿಯು ಸಹಜವಾಗಿ ತನ್ನ ವಸತಿಗೆ ಹೋಗಿಬಿಟ್ಟಳು. ಆದರೆ ಮುಂದೆ ಒಂದೆರಡು ಸಾರೆ ಆಕೆ ಬಂದಾಗಲೂ ಈತನು ಮಾತನ್ನೇ ಆಡಲಿಲ್ಲ. ಆಗ ಅವಳಿಗೆ ಏನೋ ಒಂದಿಷ್ಟು ಅನಿಸಿದಂದಾಯಿತು. ಆದರೆ ಅವಳೇನೂ ಬೇಗನೆ ಆತುರತೆಗೆ ಬೀಳುವವಳಲ್ಲ. "ನೋಡೋಣ, ತುಸು ದಿನಗಳಲ್ಲಿ ಇವನು ಪುನಃ ತಣ್ಣಗಾಗದಿರನು." ಎಂಬುದು ಅವಳಿಗೆ ಅನುಭವದ ಮಾತು.

ಈ ಕಾಲದಲ್ಲಿ ನಮ್ಮ ನಾಯಕನು ಹೊರಗೆ ಅವಳೊಡನೆ ಹೀಗೆ ಮಾತನಾಡುವುದನ್ನು ತೊರೆದಿದ್ದನಾದರೂ ಒಳಗೊಳಗೆ— 'ಇದೂ ಒಂದು ಉಪಾಯ. ಅಂತಃಕರಣಪೂರ್ವಕವಾಗಿಯೇನೂ ನಾನವಳನ್ನು ವಿರೋಧಿಸುತ್ತಾ ಇಲ್ಲ. ಒಳಗೆ ನಾನು ಆತ್ಮೌಪಮ್ಯ ಭಾವನೆಯುಳ್ಳವನೇ ಇದ್ದೇನೆ. ತಾಪತಡಿಗಳನ್ನು ತಾಳಲಾರದುದಕ್ಕೆ ಹೀಗೆ ಏನೋ ಎಂತೋ ನಡಿಸಿದ್ದೇನೆ.' ಎಂದು ಅಂದುಕೊಳ್ಳುತ್ತಿರುವನು.

ಇಷ್ಟರಲ್ಲಿ ಈತನ ನೆರೆಯ ಪಟ್ಟಣಕ್ಕೆ ಮಹಾ ಅನುಭಾವಿಯಾದ ಲೋಕನಾಯಕನ ದಿವ್ಯಾಗಮನವಾಯಿತು. ಆಗ ಮಡದಿ ಮಕ್ಕಳನ್ನೂ ಹಾಗೂ ಗೆಳೆಯರೆಲ್ಲರನ್ನೂ ಕೂಡಿಕೊಂಡು ದರ್ಶನಕ್ಕೆ ಹೋದನು.

ತಾಯಿಗೆ ಮಾತ್ರ ಈ ಸುಸಂಧಿಯು ಲಭಿಸಲಿಲ್ಲ. ಅವಳ ದುರ್ದೈವ. ಇವರೆಲ್ಲರೂ ಪಯಣಕ್ಕೆ ಹೊರಡುವ ದಿನ ಅವಳು ಸಹಜವಾಗಿ ತನ್ನ ಕ್ರಮದಂತೆ ಅಲ್ಲಿಗೆ ಬಂದಿದ್ದಳು. ಆದರೆ ಅವೊತ್ತೂ ನಮ್ಮ ನಾಯಕನು ಅವಳೊಡನೆ ಮಾತನಾಡಲಿಲ್ಲ. "ನೀನು ಯಜ್ಞಪೀಠಕ್ಕೆ ನಿನ್ನ ನೈವೇದ್ಯವನ್ನರ್ಪಿಸುತ್ತಿರುವಾಗ ನಿನ್ನ ನೆರೆಯುವನೊಡನೆ ನಿನಗಿದ್ದ ಮನೋವೈಷಮ್ಯವು ನೆನಪಿಗೆ ಬಂದರೆ ಕೂಡಲೆ ಅದನ್ನು ಅಲ್ಲೇ ಬಿಟ್ಟು ಮೊದಲು ನಿನ್ನ ನೆರೆಯುವನೊಡನೆ ಸಂಧಿಯನ್ನು ಮಾಡಿಕೊಂಡು ಬಾ. ಅಂದರೆ ನಿನ್ನ ನೈವೇದ್ಯವು ದೇವರಿಗೆ ಸಲ್ಲೀತು." ಎಂದು ಪುರಾತನ ಮಹಾ ಅವತಾರಿಯೊಬ್ಬನಾಡಿದ ಮಾತು ಆಗಲೂ ಆತನಿಗೆ ಕಿವಿಯಲ್ಲಿ ಕೇಸರಿಟ್ಟಿದ್ದಿತು. ಆದರೂ—'ಇದೊಂದು ಉಪಾಯವೇ ಹೊರತು ಅಪಾಯಚಿಂತಸೆಯಲ್ಲ. ಆದುದರಿಂದ ನಾನಿದಕ್ಕೆ ಹಿಂದೆ ಸರಿಯುವುದು ಬೇಡ.' ಎಂದುಕೊಂಡು ಹಾಗೇ ಇದ್ದುಬಿಟ್ಟನು.

ಅಲ್ಲಿ ಮಹಾ ಅನುಭಾವಿಯ ದರ್ಶನದಿಂದ ಅಂತರಂಗದಲ್ಲಿ ಒಂದು ಅಪೂರ್ವವಾದ ಧನ್ಯತೆ! "ಸತ್ಯವು ನಮ್ಮ ಧ್ಯೇಯ. ಅಹಿಂಸೆಯು ಅಂದರೆ ವಿಶ್ವಪ್ರೇಮವು ಅದರ ಸಾಧನ" ಎಂಬುದು ಆ ಲೋಕೋತ್ತರ ಪುರುಷನ ದಿವ್ಯ ಸಂದೇಶ. ಆತನ ದರ್ಶನವೆಂದರೆ ಆತನ ತತ್ತ್ವದ ಘನೀಭೂತಪಿಂಡವೊಂದನ್ನು ನೋಡಿದಂತೆ.

ವಾಚಕರು ಇಲ್ಲಿ ಹೀಗೆ ಕೇಳಬಹುದು: ಅದೇನೆಂದರೆ—'ಎಲ್ಲಾ ಸರಿ. ಆದರೆ ಆ ಮಹಾಪುರುಷನ ಹೆಸರನ್ನೇಕೆ ಹೇಳಲಿಲ್ಲ?' ಹೀಗೇನು? ಇದಕ್ಕೆ ಕಾರಣವಿಲ್ಲದೆ ಇಲ್ಲ. ಹಿಂದೆ 'ಯಾತ್ರಿಕನ ಪಯಣಗತಿ' ಎಂಬ ಪುಸ್ತಕದ ಹೆಸರನ್ನು ಬೇಗನೆ ಹೇಳದಿದ್ದುದಕ್ಕೆ ಏನು ಕಾರಣವಿದ್ದಿತೋ ಅದೇ ಇಲ್ಲಿಯೂ.

ಅದೇನೆಂದರೆ— ಲೋಕದಲ್ಲಿ ಈ ಮಹಾಪುರುಷನ ಹೆಸರನ್ನು ಕೇಳದವರೇ ಇಲ್ಲ. 'ಮಹಾತ್ಮಾ ಗಾಂಧಿ'ಯೆಂದು ಎಲ್ಲರೂ ಬಲ್ಲರು. ಆದರೂ ಆತನೊಬ್ಬ ಮಹಾ ಅನುಭಾವಿಯೆಂಬುದು ಬಹುಜನರಿಗೆ

ಗೊತ್ತೇ ಇಲ್ಲ. 'ಏನೋ ಬಲು ದೊಡ್ಡ ಮನುಷ್ಯ' ಎಂದು ಮಾತ್ರ ಎಲ್ಲರೂ ಒಲ್ಲರು. ಆದರೆ ಆ ಲೋಕೋತ್ತರ ಪುರುಷನ ನಿಸ್ಸೀಮ ಅನುಭಾವವನ್ನು ಯಾರೂ ಲಕ್ಷಿಸುವುದಿಲ್ಲವಲ್ಲಾ!!!

ಆತನು ಮಹಾ ಅನುಭಾವಿ. ಈ ವಿಷಯವನ್ನು ಕುರಿತು ಆ ಮಹಾಪುರುಷನು ತಾನೇ ಹೇಳಿರುವುದು ಹೀಗೆಂದರೆ—

'ನಾನು ಪಡೆಯಬೇಕಾದುದು, ಈ ಮೂವತ್ತು ವರ್ಷ ಪಡೆಯಲು ಹವಣಿಸುತ್ತಿರುವುದು ಆತ್ಮಸಿದ್ಧಿಗಾಗಿ, ದೇವದೇವನನ್ನು ಕಣ್ಣಾರೆ ನೋಡುವುದಕ್ಕಾಗಿ, ಮೋಕ್ಷಹೊಂದುವುದಕ್ಕಾಗಿ. ನಾನು ಇರುವುದು, ಹಾತೊರೆವುದು, ಹರಿದಾಡುವುದು ಆ ಧ್ಯೇಯಪೂರ್ತಿಗಾಗಿ. ರಾಜಕೀಯ ಕ್ಷೇತ್ರವೊಳಗಿನ ನನ್ನ ಮಾತುಕಥೆ ಬರೆವಣಿಗೆಯೆಲ್ಲ ಇದೇ ಗುರಿಯಿಟ್ಟು ಸಾಗಿದೆ.'

"ನಾನು ಕೇಳಿದುದು ಒಂದು ಶ್ರುತಿ (ಧ್ವನಿ) ಅತಿ ದೂರದಿಂದ, ಅತಿ ಸಮೀಪದಿಂದ. ಮಾನವಧ್ವನಿಯಂತೆಯೇ ಸುಸ್ಪಷ್ಟವೂ ಅನಿವಾರ್ಯವಾಗಿ ನನ್ನನ್ನೆ ಕುರಿತು ಅದು ಆಡಿದುದು ಆಗಿತ್ತು. ನಾನು ಕನವರಿಕೆಯಲ್ಲಿರಲಿಲ್ಲ. ಚೆನ್ನಾಗಿ ಕೇಳಿದೆ ಧ್ವನಿಯನ್ನು. ಆ ಧ್ವನಿಯನ್ನು ಕೇಳುವ ಪೂರ್ವದಲ್ಲಿ ಭಯಂಕರವಾದ ಕೋಲಾಹಲವೆದ್ದಿತ್ತು ನನ್ನ ಅಂತರಂಗದಲ್ಲಿ. ಕೂಡಲೆ ಆ ಧ್ವನಿ ಕೇಳಬಂದಿತು. ನಾನು ಕೇಳಿದೆ; ಶ್ರುತಿಯೆಂದು ನಿಶ್ಚಯಿಸಿಕೊಂಡಮೇಲೆ ಮನದ ಒಳತೋಟಿ ನಿಂತಿತು........ಹರ್ಷಾಧೀನನಾದೆ........ಹೊಸ ಉತ್ಸಾಹ ಬಂದಿತು........ಅತಿ ತಪ್ತವಾದ ನನ್ನ ಕಲ್ಪನೆಯ ಪ್ರತಿಧ್ವನಿಯಲ್ಲವದು. ಅದು ಶ್ರುತಿಧ್ವನಿಯೆನ್ನಲಿಕ್ಕೆ ಬೇರೆ ಪ್ರಮಾಣವನ್ನು ಇನ್ನೇನು ಹೇಳಲಿ? ಜಾತಿಸಂಶಯವಾದಿಗೆ ಮನಗಾಣಿಸಿಕೊಡುವ ಬೇರೆ ಯಾವ ಪ್ರಮಾಣವೂ ನನ್ನ ಬಳಿಗಿಲ್ಲ....ಆದರೆ ನಾನಿಷ್ಟು ಹೇಳಬಲ್ಲೆ—ಇಡಿ ಜಗತ್ತಿನ ಏಕಮುಖವಾದ ನಿರ್ಣಯವೂ ಕೂಡ ಅದು ದೇವನ ಧ್ವನಿ ಅಲ್ಲವೆಂದು ಸಾರಿದರೂ ನನ್ನ ಶ್ರದ್ಧೆಯು ಅವಿಚಲಿತವಾಗಿ ಉಳಿದೀತು.'

ಅಲ್ಲಿಯಿಂದ ಆ ದಿವ್ಯಪುರುಷನು ಮುಂದಕ್ಕೆ ಪಯಣಬೆಳಿಸಿದಮೇಲೆ ಈತನು ತನ್ನವರನ್ನೆಲ್ಲ ಹಿಂದಕ್ಕೆ ಕಳುಹಿಸಿ ವಿಶ್ರಾಂತಿಯು ಸಲುವಾಗಿ ಒಂದು ತಿಂಗಳವುಟ್ಟಿಗೆ ಅಲ್ಲಿಯೇ ಉಳಿದುಕೊಂಡನು.

ಹಿಂದಿನ ಇಡೀ ತಿಂಗಳಲ್ಲಿ ಮಾಪಿನತೋಪಿನಲ್ಲಿದ್ದಾಗ ನಮ್ಮ ನಾಯಕನಿಗೆ ಋಷಿತುಲ್ಯರಾದ ಟಾಲಸ್ಟಾಯ್ ಅವರ 'ಆತ್ಮನಿವೇದನ' ಮತ್ತು 'ಇಪ್ಪತ್ಮೂರು ಕಥೆಗಳು' ಎಂಬ ಎರಡು ಉಪನಿಷತ್ ಸದೃಶ ಗ್ರಂಥಗಳು ಕೈಗೆ ಬಿದ್ದಿದ್ದವು. ಅವು ಆತನಲ್ಲಿ ಬೆಳೆದುಬರುತ್ತಿದ್ದ ಆತ್ಮೌಪಮ್ಯಭಾವನೆಗೆ ಬಹಳೇ ಹೆಚ್ಚಿನ ಬೆಳಕನ್ನು ಕೊಟ್ಟಿದ್ದವು. ಅಲ್ಲದೆ ಅವುಗಳೊಳಗೊಂದಾದ "ದೇವಪುತ್ರ"ನೆಂಬವನ ಕಥೆಯು ಒಂದು ಹೊಸ ಕವಚವನ್ನೇ ಕಲ್ಪಿಸಿಕೊಟ್ಟಿದ್ದಿತು. ಅದರಲ್ಲಿ ಋಷಿಕುಮಾರ ನಾದ ದೇವಪುತ್ರನೆಂಬವನು ಒಬ್ಬ ವಿಖ್ಯಾತನಾದ ಕಳ್ಳನನ್ನು ತಿದ್ದುವು ದಕ್ಕೆ ಹವಣಿಸುತ್ತಾನೆ. ಆದರೆ ಆ ಕಳ್ಳನು ಅವನಿಗೆ—'ನೀನೂ ನನ್ನಂ ತೆಯೇ ಇನ್ನೊಬ್ಬರ ದುಡಿತದಮೇಲೆ ಹೊಟ್ಟೆಯನ್ನು ಹೊರಕೊಳ್ಳುವವ ನಾದ್ದರಿಂದ ನೀನೂ ಕಳ್ಳ, ನಾನೂ ಕಳ್ಳ. ಅಂದಮೇಲೆ ನನಗೇನು ಬುದ್ಧಿಯನ್ನು ಕಲಿಸುವಿ?" ಎಂದು ಧಿಕ್ಕರಿಸುವನು. ಈ ಮಾತು ಆ ಯತಿಕುಮಾರನಿಗೆ ಸರಿಯೆನಿಸಲು ಅವನು ಜನರು ಸಲ್ಲಿಸುವ ಆಹಾರ ವಸ್ತುಗಳನ್ನೆಲ್ಲ ತ್ಯಜಿಸಿ ಅಡವಿಯ ಗಡ್ಡೆಗೆಣಸುಗಳಿಂದ ಉಪಜೀವಿಸಲಿಕ್ಕೆ ಮೊದಲು ಮಾಡುವನು. ಪುನಃ ಕಳ್ಳನ ಭೆಟ್ಟಿಯಾದಾಗ ಈತನು ಅವ ನಿಗೆ ಬುದ್ಧಿಯನ್ನು ಹೇಳಹೋಗಲು ಅವನು ಈತನಿಗೆ "ಕೊಂದೇನು!" ಎಂದು ಹೆದರಿಕೆ ಹಾಕುತ್ತಾನೆ. ಅದಕ್ಕೆ ದೇವಪುತ್ರನು ಹಿಂದೆ ಸರಿಯು ವನು. ಮುಂದೆ ಕೆಲವು ವರ್ಷಗಳು ಹೀಗೆ ಕಳೆದ ಮೇಲೆ ಇವನ ಅವಸ್ಥೆ ಇನ್ನೂ ಮೇಲಕ್ಕೆ ಏರುತ್ತದೆ. ಆಗ ಈತನ ಮರಣಭಯವೆಲ್ಲಾ ಲೋಪಿಸಿಬಿಡಲು ಪುನಃ ಕಳ್ಳನ ಗೊಡವಿಗೆ ಹೋಗುತ್ತಾನೆ. ಅದಕ್ಕೆ ಅವನು ಒಂದಿಷ್ಟು ಹಣ್ಣಿಗೆ ಬಂದಂತೆ ಕಂಡರೂ ಮತ್ತೆ ಲೆಕ್ಕಿಸದೆ ಓಡಿಯೇ ಹೋಗುತ್ತಾನೆ. ಕೊನೆಗೆ ಈತನಲ್ಲಿ ಸರ್ವಪ್ರಾಣಿಗಳಲ್ಲೆಲ್ಲಾ ದೇವನ ಬೆಳಕೇ ಆತ್ಮಸ್ವರೂಪದಿಂದ ಅವಿತು ಕುಳಿತಿದೆಯೆಂಬುದು

ಅನುಭವಕ್ಕೆ ಬಂದಾಗ ಆ ಕಳ್ಳನನ್ನು ಅಪ್ಪಿಕೊಂಡು ಅತ್ಯಂತ ಸಮತ್ವ ಬುದ್ಧಿಯಿಂದ "ಓ ನನ್ನ ಪ್ರಿಯ ಬಂಧುವೆ, ನಿನ್ನಂತೆಯೇ ಇರುವ ಬೇರೆ ಆತ್ಮಗಳನ್ನು ನೋಯಿಸಿ ನಿನ್ನ ಆತ್ಮಕ್ಕೆ ಮುಂದೆ ನೋವಿನ ಬುತ್ತಿಯನ್ನು ಕಟ್ಟಿಕೊಳ್ಳಬೇಡ! ನಿನ್ನೊಳಗೆ ದೇವರ ಆತ್ಮವಿದೆ ನೋಡಿಕೊ." ಎಂದು ತೆಕ್ಕೆಗೆ ಬಿದ್ದು ಕಣ್ಣೀರು ಸುರಿಸುತ್ತಾನೆ. ಆಗ ಆ ಕಳ್ಳನು ಮಾನಸಾಂತರ ಹೊಂದಿ—"ಇಪ್ಪತ್ತು ವರುಷಗಳಿಂದ ನಾನು ನಿನಗೆ ಪ್ರತಿಭಟಿಸಿದ್ದೆನು. ಆದರೆ ಇಂದು ನೀನು ನನ್ನನ್ನು ಗೆದ್ದೆಯಲ್ಲ! ನನ್ನನ್ನು ಈಗ ನಿನ್ನ ಮನಬಲ್ಲಂತೆ ಏನು ಮಾಡುವಿಯೋ ಮಾಡು. ನನ್ನಮೇಲೆಯೇ ನನಗೀಗ ಬಲವು ಉಳಿದಿಲ್ಲ." ಎಂದು ನುಡಿದು ಋಷಿಕುಮಾರನಿಗೆ ಒಳಗಾಗಿ ಬಿಡುವನು.

"ಓ ಪ್ರಿಯ ಬಂಧುವೇ!" "ನಿನ್ನೊಳಗೆ ದೇವರ ಆತ್ಮವಿದೆ ನೋಡಿಕೋ!" ನಿನ್ನಂತೆ ನಿನ್ನ ನೆರೆಯವರೊಳಗೆಲ್ಲಾ ಅದೇ ತುಂಬಿಕೊಂಡಿದೆ!' ಮುಂತಾದ ಮಾತುಗಳೂ, ಆ ಕಳ್ಳನ ಹಾಗೂ ದೇವಪುತ್ರನ ಕೊನೆಯ ಆತ್ಮಾಲಿಂಗನದ ಪರಮಪಾವನ ದೃಶ್ಯವೂ, ಪುನಃ ಈಗ ಈ ಮಹಾಪುರುಷನೊಬ್ಬನ ದರ್ಶನದಿಂದ ನಮ್ಮ ನಾಯಕನ ಕಣ್ಣಮುಂದೆ ಕಟ್ಟಿದಂತಾದವು!

ಪೂರ್ವರಂಗದ ಕೊನೆಯ ಪ್ರಕರಣದಲ್ಲಿ ಹೇಳಿದ 'ಬ್ರಹ್ಮಸಂಸ್ಪರ್ಶ'ವೆಂಬ ಅವಸ್ಥೆಗೆ ಬಂದಬಳಿಕ ಸಾಧಕನಿಗೆ ತಾನು ದೇವನ ಸೂತ್ರದ ಗೊಂಬೆಯಾಗಿದ್ದೇನೆಂಬ ಅನುಭವವು ಬರುತ್ತದೆ. 'ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ' ಎಂದು ಆಗ ಸಾಧಕ ಜೀವವು ದೇವದೇವನಿಗೆ ಬಿನ್ನವಿಸುವುದು. ಆದರ ಮುಂದೆ 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ—ಈಶ್ವರನು ಸರ್ವಜೀವಿಗಳ ಅಂತರಂಗದಲ್ಲಿದ್ದು-ಕೊಂಡಿದ್ದಾನೆ.' ಎಂಬುದರ ಸಾಧನವು ಆರಂಭವಾಗುತ್ತದೆ. ಆಗ 'ಅವರಾರೂ ಆತನ ಸೂತ್ರದಿಂದಲ್ಲದೆ ಚಲಿಸಲಾರರು' ಎಂಬುದು ಅನುಭವಕ್ಕೆ ಬರುತ್ತದೆ. ಇದರಿಂದ ಸರ್ವರನ್ನು ಸಮತ್ವಭಾವದಿಂದ ನೋಡಲಿಕ್ಕೆ ಶಕ್ಯವಾಗುತ್ತದೆ. ಇದರ ಮುಂದೆ ಈಶ್ವರೇಚ್ಛೆಯಿದ್ದರೆ

ಮಾನವನು ಅತಿಮಾನವನಾಗಿ ವಿಜ್ಞಾನಕ್ಕೆ ಮುಟ್ಟುತ್ತಾನೆ. ಎಂದು ಅರವಿಂದರು "ಯೋಗದ ಗೊತ್ತುಗುರಿ"ಯೆಂಬ ಗ್ರಂಥದಲ್ಲಿ ಹೇಳಿದುದು ನಮ್ಮ ನಾಯಕನಿಗೆ ನೆನಪಿನಲ್ಲಿರಲಿಲ್ಲವೆಂತಲ್ಲ. ಆದರೆ ಕಾಳ-ರಾತ್ರಿಯ ಕಾಲದಲ್ಲಿ ಒಂದುಮಾತಿಗೆ ಹತ್ತು ಸಾಕ್ಷಿಗಳಾದಾಗ ಜೀವವು ಒಂದಿಷ್ಟು ಕಣ್ಣುತೆರೆದು ನೋಡುತ್ತಿರುತ್ತದೆ. ಕಗ್ಗತ್ತಲಲ್ಲಿ ಅದು ಅಷ್ಟೊಂದು ಮುಸಣಿಸಿರುತ್ತದೆ ಇಷ್ಟೇ.

ಅರವಿಂದರ ಪಾಂಡೀಚೇರಿಯ ಸಂಭಾಷಣದ ಪುಸ್ತಕದಲ್ಲಿ—"ಸಾರ್ವಜನೀನಪ್ರೇಮ (Universal love), ಸಮರ್ಪಣ (Surrender) ಮತ್ತು ಸಂಪೂರ್ಣಶ್ರದ್ಧೆ ಇವಿಷ್ಟು ಕೂಡಿದರೆ ಆಗ ಹೃದಯದ ಸರ್ವ ಪ್ರತಿಬಂಧಕಗಳು (Obstruction) ಹೊರಟು ಹೋಗುವವು." ಎಂದು ಹೇಳಿದುದನ್ನು ಜ್ಞಾನಭಿಕ್ಷುವು ಎಂದೋ ಎದೆಯಲ್ಲಿ ಕೊರೆದು ಇಟ್ಟು ಕೊಂಡಿದ್ದನಾದರೂ ಈಗ ಕಾಳರಾತ್ರಿಯ ಜಂಗು ಏರಿದ್ದರಿಂದ ಸ್ಮರಣದ ಪ್ರಭೆಯು ಹೀಗೆ ಮಾಸಿ ಹೋಗಿದ್ದಿತು.

"ವೈರವು ವೈರದಿಂದ ಆರದು. ಅದರ ಮದ್ದು ಪ್ರೇಮವೇ." ಎಂಬ ಬುದ್ಧದೇವನ ಧರ್ಮಪದದ ವಾಕ್ಯವನ್ನು ಆತನು ಎಂದೋ ಓದಿದ್ದನಾದರೂ ಅದನ್ನು ಸಂಪೂರ್ಣವಾಗಿ ಪ್ರಯೋಗಿಸುವ ಕೌಶಲ್ಯವು ಈವರೆಗೂ ತಿಳಿದಿರಲಿಲ್ಲ.

ಹೊತ್ತಿಗೆ ಸರಿಯಾಗಿ ಇದೀಗ ಗೆಳೆಯರಿಬ್ಬರಲ್ಲಿದ್ದ ಎರಡು ಪುಸ್ತಕ ಗಳು ಜ್ಞಾನಭಿಕ್ಷುವಿನ ಕೈಗೆ ಬಿದ್ದವು. ಅವುಗಳೊಳಗಿನ ಅವತರಣ ಗಳನ್ನು ಆತನು ಹಿಂದಕ್ಕೆ ಬೇರೆ ಪುಸ್ತಕಗಳಲ್ಲಿ ನೋಡಿದ್ದನಾದರೂ ಇದುವರೆಗೆ ಈ ಮೂಲಗ್ರಂಥಗಳು ಕೈಗೆ ಸಿಕ್ಕಿರಲಿಲ್ಲ. ಆದರೆ ಎಂದಾ ದರೂ ಒಮ್ಮೆ ಸಿಕ್ಕರೆ ನೋಡಬೇಕು ಎಂದು ಮಾತ್ರ ಆತನ ಇಚ್ಛೆ ಯಿದ್ದಿತು. ಅವು ಈಗ ಸಿಕ್ಕೇಬಿಟ್ಟವು.

ಒಂದು—'Trine' (ಟ್ರಾಯಿನ್) ಎಂಬವರು ಬರೆದ 'In tune with the infinite' (ಅನಂತದ ಸಮಸ್ವರದಲ್ಲಿ) ಎಂಬುದು

ಮತ್ತೊಂದು 'Allen' (ಆ್ಯಲನ್ ಎಂಬವರು ಬರೆದ 'Through the gate of Good' (ಉತ್ತಮಿಕೆಯ ಮಹಾದ್ವಾರದೊಳಗಿಂದ) ಎಂಬುದು.

"ಒಂದಿಷ್ಟು ಆಳವಾಗಿ ನೋಡು ಪ್ರತಿಮಾನವ ಜೀವದಲ್ಲಿಯೂ ಪ್ರತಿದೇವಸನ್ನೆ ಕಾಣುವಿ. ದೇವನನ್ನು ಗುರುತಿಸಲು ದೇವನೆಬೇಕು ಇದು ಮಾತ್ರ ನೆನಪಿರಲಿ. ದೇವನು ದೇವನೊಡನೆ ಮಾತನಾಡುತ್ತಲೆ ದೇವನೆ ಪ್ರತ್ಯುತ್ತರಕೊಡುವನು; ದೇವನೆ ಪ್ರಕಟನಾಗುವನು. ದೈವವು ದೈವನೊಡನೆ ಮಾತನಾಡಿದರೆ ದೈವವೆ ಉತ್ತರ ಕೊಡುವದು; ದೈವನ ಫಲ ದೈವಕ್ಕೆ."

"ನಿಮ್ಮ ವೈರಿಗಳನ್ನು ಪ್ರೀತಿಸಿರಿ—ಆದರೆ ಪಾಶವ ಅಹಂಕಾರ ದಲ್ಲಿರುವವರೆಗೆ ವೈರಿಗಳನ್ನು ಪ್ರೀತಿಸುವದಸಾಧ್ಯ. ಮಾನವನೊಳಗಿನ ಪಶುವಿಗೆ ದೇವನನ್ನು ಗುರುತಿಸುವದೂ ಅವನಿಗೆ ಉತ್ತರ ಕೊಡುವದೂ ಎಂದಿಗೂ ಆಗದು. ದಿವ್ಯವೇ ದಿವ್ಯಕ್ಕೆ ಉತ್ತರಕೊಡಬಲ್ಲದು. ನಿಜವಲ್ಲ ದುದಕ್ಕೆ ಅಂಟಿಕೊಂಡಿರುವವರೆಗೆ ಮಾನವನಿಗೆ ನಿಜವು ತೋರದು."

ಮೇಲಿನ ಈ ವಾಕ್ಯಗಳನ್ನು ಆ ಪುಸ್ತಕಗಳಲ್ಲಿ ಓದಿದಾಗ ನಮ್ಮ ನಾಯಕನಿಗೆ ಒಂದು ಮಾತು ಹೀಗೆ ಅನಿಸಹತ್ತಿತು—ಇದೇನು? ಒಂದೇ ಸವನೆ ಎಲ್ಲಾ ಸಿಟ್ಟಿನಿಂದ ಆಕಾಶವಾಣಿ ಕೂಗಿದಂತೆ ಹೀಗೆ ಕೀಸರಿಟ್ಟಿ ತಲ್ಲಾ! ಯಾವ ಪುಸ್ತಕವು ಕೈಗೆಬಿದ್ದರೂ ಅದರಲ್ಲಿ ಇದೇ ಒಂದು ಮಾತು ತೂರಿ ಮೈಮೇಲೆ ಬಂದಂತೆ ಆಗುತ್ತದೆಯಲ್ಲಾ! "**ನಿರ್ವೈರಃ ಸರ್ವಭೂತೇಷು!**" "**Love your enemies!**"

ಆಗ ಅಲ್ಲಿ ವಿಶ್ರಾಂತಿಗೆಂದು ಕಳೆದ ಒಂದು ತಿಂಗಳೆಲ್ಲಾ ಇದೇ ಒಂದು ನಿತ್ಯ ಜಪವಾಗಿ ಬಿಟ್ಟಿತು. ಯಾವಾಗಲೂ ಅದರ ಮೇಲೆಯೇ ವಿಚಾರ; ಅದೇ ವಾಚನ. ಮನನ ಪಠನಗಳೆಲ್ಲಾ ಅದೊಂದರಲ್ಲಿಯೇ ತನ್ಮಯವಾಗಿಬಿಟ್ಟವು. ಅಂತರಂಗದಲ್ಲಿ ಒಂದು ಹೊಸ ರಾಜ್ಯವೇ ಪ್ರಾರಂಭವಾದಂತಾಯಿತು!

ಅದರ ಪರಿಣಾಮವೇನಾಯಿತೆಂದು ಕೇಳುತ್ತೀರಾ? ಅಯ್ಯೋ! ಅದೆಂಥಾ ಅದ್ಭುತ ವಿಚಿತ್ರ!! ಊಹಿಸಲಳವಲ್ಲ!!!

**ತಿರುಗಿ ಊರಿಗೆ ಬರುವಷ್ಟರೊಳಗಾಗಿ ಆ ತಾಯಿಯು ನಿಜವಾದ ತಾಯಿಯೇ ಆಗಿ ಬಿಟ್ಟಿದ್ದಾಳೆ!**

ಅವಳೀಗ ಹಿಂದಿನ ಸಿಡುಕು ದುಡುಕುಗಳನ್ನೆಲ್ಲ ಮರೆತುಬಿಟ್ಟಿದ್ದಾಳೆ. ಮನೆಯಲ್ಲಿ ಮಕ್ಕಳು ಮರಿಗಳನ್ನೆಲ್ಲಾ ಈಗ ರಂಜಿಸಿ ಜೋಪಾನ ಮಾಡುತ್ತಾಳೆ. ಸೊಸೆಗೂ ಮಗನಿಗೂ ಜೀವಕ್ಕೆ ಹತ್ತುವಂಥ ಮಾತುಗಳನ್ನು ಈಗ ಎಷ್ಟೂ ಆಡುವದಿಲ್ಲ. ಅಲ್ಲದೆ ಮಾರಬೇಕಾಗಿದ್ದ ದನಕರುಗಳನ್ನೆಲ್ಲಾ ಮಾರಿ ತಾನಾಗಿಯೇ ಉಳಿದ ಸಾಲವನ್ನೆಲ್ಲ ತೀರಿಸಿದ್ದಾಳೆ! ಊರಿಗೆ ಬರುವದರೊಳಗಾಗಿ ಹೀಗೆ ಭೂವ್ಯಾಕಾಶಗಳಷ್ಟು ವ್ಯತ್ಯಾಸವಾಗಿಬಿಟ್ಟಿದೆ. ಈಗ ನಮ್ಮ ನಾಯಕನು ವಿಶ್ರಾಂತಿಗೆಂದು ಬೇರೆ ಸ್ಥಳವನ್ನೇ ಹುಡುಕುವ ಕಾರಣವು ಉಳಿಯಲಿಲ್ಲ! ಇದ್ದಲ್ಲಿಯೇ ಇನ್ನು ಬೇಕಾದಷ್ಟು ವಿಶ್ರಾಂತಿಯು ಸಿಗಬಲ್ಲದು.

ನಮ್ಮ ನಾಯಕನಿಗೆ ಇಂಥದೊಂದು ಹೆಚ್ಚಿನ ಸ್ಥಿತಿಯವರೆಗೆ ಒಯ್ಯುವುದಕ್ಕಾಗಿಯೇ ದೇವರಾಯನು ಆತನ ತಾಯಿಯಲ್ಲಿ ಅಷ್ಟೊಂದು ನಿಷ್ಠುರತೆಯನ್ನು ಹುಟ್ಟಿಸಿದ್ದನೆಂದು ಈಗ ನಾವು ಅನ್ನಬಹುದಲ್ಲವೆ? ಮೊದಲು ಏಳು ವರುಷ ಹೊತ್ತಿ ಆ ಮೇಲೆ ಮತ್ತೆ ಏಳು ವರುಷ ಧಗಧಗಿಸಿ ಇಂದಿಗೆ ಹದಿನಾಲ್ಕು ವರುಷಗಳ ಆ ಮಹಾಜ್ವಾಲೆಯು ಆರಿಹೋಯಿತು!

ಮಾತು ಬಿಟ್ಟದ್ದರಿಂದಲೇ ಹೀಗೆ ಆಯಿತೆಂದು ಹೊರಗಿನಿಂದ ನೋಡುವವರು ಆಡಿಕೊಳ್ಳಬಹುದಾದರೂ ಒಳಗಿನಿಂದ ವಿಚಾರಮಾಡಿದರೆ 'ನಿರ್ವೈರಃ ಸರ್ವಭೂತೇಷು' ಎಂಬ ಮಹಾ ಪ್ರೇಮಮಂತ್ರವೇ ಇದಕ್ಕೆಲ್ಲಾ ಕಾರಣವೆಂದು ಸ್ಪಷ್ಟವಾಗಿ ತೋರದಿರದು. ಅಲ್ಲದೆ ಇದೇ ಕಾಲಕ್ಕೆ ಹರ್ಷಲ್ ಎಂಬ ಗ್ರಹವು ತಾನಿದ್ದ ರಾಶಿಯನ್ನೂ ಸ್ಥಾನವನ್ನೂ ಬಿಟ್ಟು ಮುಂದಕ್ಕೆ ಸರಿದದ್ದೂ ಇದಕ್ಕೆ ಕಾರಣವಾಯಿತೆಂದು ಹೇಳಬಹುದಾದರೂ, ಸಮಸ್ತ ವಿಶ್ವದ ಮಹಾ ಸ್ಪಂದನ ಸ್ವರೂಪವಾದ ಈಶಸಂಕಲ್ಪವೇ ಗ್ರಹಚಲನಕ್ಕೆ ಕಾರಣವಾಗಿರುವದರಿಂದ ಆತನ ಅನುಗ್ರಹದಿಂದಲೇ ಇದೆಲ್ಲಾ ನಡೆಯಿತೆನ್ನಬೇಕಾಗುತ್ತದೆ. ನಮ್ಮ

ನಾಯಕನ ಚತುರ್ಮುಖ ಸಿದ್ಧಾಂತವು ಏನೇ ಇರಲೊಲ್ಲದೇಕೆ; ಆದರೆ ಆತನ ಜೀವನವು ಇಂದಿಗೆ ಒಂದು ಹೊಸತತ್ವದ ರುಚಿಯನ್ನು ನೋಡಿ ದಂತಾಯಿತು !

ಹಿಂದೆ ಮಂಜುಳನೊಡನೆ ಆತ್ಮ ಸಾಮರಸ್ಯವುಂಟಾಗಬೇಕಾದರೂ ಈಶಪ್ರಾರ್ಥನೆಯೇ ಕಾರಣವಾಯಿತು. ಮುಂದೆ ರೋಹಿಣಿಗೆ ತನ್ನ ನಲ್ಲನ ಜೀವನದ ಅರ್ಥವಾಗುವುದಕ್ಕೂ ಅಸಾಧಾರಣ ಕಾರಣವೇ ಉಂತಾಯಿತು; ತಿರುಗಿ ಆತನ ತಾಯಿಯ ಅಂತರಂಗವು ಮೃದುವಾಗುವುದಕ್ಕೂ ಆತ್ಮಶಕ್ತಿಯೇ ಕಾರಣವಾಯಿತು. "ಈಶಾನುಗ್ರಹದಿಂದ ಆತ್ಮ ತೇಜವು ಪ್ರಕಟವಾದಲ್ಲದೆ ನಮಗೆ ಗೆಲವೆಂಬುದಿಲ್ಲ" ವೆಂದು ನಮ್ಮ ನಾಡಿನ ಮಹಾ ಸಿಂಹಗಳೆರಡು (ಅರವಿಂದರು ಮತ್ತು ಮಹಾತ್ಮಾಜಿ) ಈಗ ಗರ್ಜನೆಯನ್ನೆಬ್ಬಿಸಿದ್ದರ ಅರ್ಥವೂ ಇದೇ. ಈ ಅಧ್ಯಾತ್ಮ ಸಿಂಹಗಳ ನವಯುಗದ ನವಮಂತ್ರವು "ಅನುಭವಕ್ಕೆ ಬರುವ ಮಾತು" ಎಂದು ನಮ್ಮ ನಾಯಕನಿಗೀಗ ಸಿದ್ಧವಾದಂತಾಯಿತು.

ಜ್ಞಾನಭಿಕ್ಷುವು ಇಲ್ಲಿಗೆ ಪ್ರತಿವರುಷದಂತೆ ಡಿಸೆಂಬರ್ ತಿಂಗಳ ಅಂತರ್ನಿರ್ದೇಶದ ಮೇಲೆ ಆಶೆಯನ್ನಿಟ್ಟುಕೊಂಡು ಕೂಡುವುದನ್ನು ಬಿಟ್ಟುಬಿಟ್ಟನು. "ಹೇಗಾದರೂ ಅದು ಪ್ರತಿವರುಷ ಬಂದೇ ಬರುವುದು. ಮತ್ತು ವರುಷದಲ್ಲಿ ಐದು ತಿಂಗಳು ವಿಚಿತ್ರಕಷ್ಟವೊದಗುವುದೂ ಅಷ್ಟೇ ನಿಶ್ಚಿತ. ಹೀಗೆಂದ ಮೇಲೆ ಒಣಾ ಅಸಿಮಿಸಿಯೇಕೆ? ಕಷ್ಟ ಬಂದಾಗ ಆಗಿಸಮಟ್ಟಿಗೆ ಭೋಗಿಸೋಣ; ಅಂತರ್ನಿರ್ದೇಶ ಬಂದಾಗ ಹೇಗೂ ಅದರ ಪರಿಹಾರವು ಆಗಿಯೇ ಆಗುತ್ತದೆ; ಮತ್ತು ಮುಂದಿನ ವರುಷದ ಹಾದಿಯೂ ತೆರೆಯುತ್ತದೆ. ಹೀಗೆ ಇನ್ನೇನು ವರುಷ ನಡೆಯುವುದೋ ನಡೆಯಲಿ! ಅವರೊಳಗೇ ಯಾವುದಾದರೊಂದು ವರುಷ ಅಂತರ್ನಿರ್ದೇಶದ ಕಾಲಕ್ಕೆ ಗ್ರಹಬಲವು ಬಹಳೇ ಅನುಕೂಲವಾದರೆ ಆ ಸಾರೆ ಮಹತ್ತರವಾದ ಪಲ್ಲಟವಾದರೂ ಆಗಬಹುದು. ಚ್ಯುತಿಯಿಲ್ಲವೆಂಬುದಂತೂ ಸಂಪೂರ್ಣ ಸತ್ಯವಾಗಿದೆ. ಆದರೆ ಪ್ರಗತಿಯೇ ಆಗುವುದು; ವಿಗತಿಯೆಂಬುದಂತೂ ಇಲ್ಲವೇ ಇಲ್ಲ. ಪ್ರಗತಿಯೆಂಬುದು

ಕೆಲಕಾಲ ಮುಂದೈಸಲೂ ಬಹುದು, ಅಥವಾ ವೇಗವಂತವಾಗಲೂ ಬಹುದು. ಏನಾದರೂ ಅದು ಪ್ರಗತಿಯೇ ಹೊರತು ವಿಗತಿ ಯಲ್ಲ! ಆದುದರಿಂದ ಏನೇನು ನಡೆಯುವುದೋ ನಡೆಯಲಿ!! ನನ್ನ ಕಡಿವಾಣವು ಆತನ ಕೈಯೊಳಗಿದೆ!!!" ಎಂದು ನಮ್ಮ ನಾಯಕನೀಗ ಧೈರ್ಯವನ್ನು ತಂದುಕೊಂಡನು.*

ಹೀಗೆ ಕೆಲವು ತಿಂಗಳುಗಳು ಕಳೆದವು. ಈಗೊಂದು ವರುಷ ದಿಂದಲೂ ಜ್ಞಾನಭಿಕ್ಷುವು ತನ್ನ ಆತ್ಮಚರಿತ್ರದ ಮುಂದಿನ ಭಾಗವನ್ನು ಬರೆಯಬೇಕೆನ್ನುತ್ತಿದ್ದಾನೆ. ಆದರೆ ಇಲ್ಲಿಯವರೆಗೂ ಒಂದಿಲ್ಲೊಂದು ಕಾರಣದಿಂದ ಮುಂದೆ ಬೀಳುತ್ತಲೇ ಬಂತು. ಇಂದು ಅರವಿಂದರ ಜನ್ಮತಾರೀಖು (ಅಗಸ್ಟ ೧೫). ಪ್ರತಿವರುಷವೂ ಈ ದಿನ ನಮ್ಮ ನಾಯಕನು ಅರವಿಂದರ ತತ್ತ್ವದ ಮೇಲೆ ಅದರ ಒಂದಿಲ್ಲೊಂದು ಅಂಶ ವನ್ನು ತೆಗೆದುಕೊಂಡು ಲೇಖನವೊಂದನ್ನು ಬರೆಯುವನು. ಆ ಪ್ರಕಾರ ವಾಗಿ ಈ ಸಾರೆ "ದೇವನೇ ಗುರುವು" (God Himself is the Guru) ಎಂಬ ವಿಷಯದ ಮೇಲೊಂದು ಪ್ರಬಂಧವನ್ನು ಬರೆದನು. ಮತ್ತು ಅದನ್ನು ಬರೆದು ಮುಗಿಸಿದ ಮೇಲೆ—'ಬಹಳ ದಿನಗಳಿಂದ ಹಾಗೇ ಮುಂದಕ್ಕೆ ಬೀಳುತ್ತ ನಡೆದ ಆ ಪುಸ್ತಕವನ್ನು ಇನ್ನು ಬೇಗನೆಯೇ ಬರೆದು ಮುಗಿಸಬೇಕು' ಎಂದು ನಿರ್ಧರಿಸಿದನು.

ಮುಂದೆ ಒಂಬತ್ತು ದಿನಗಳಿಗೆ ಬರವಣಿಗೆಗೆ ಮೊದಲಾಯಿತು. (ಅಗಷ್ಟ ೨೪). ಈ ಸಾರೆಯು ಪುಸ್ತಕದ ಬರವಣಿಗೆಯಲ್ಲಿ ಒಂದು

---

* ಶ್ರೀಬಸವಣ್ಣನವರ ಈ ಕೆಳಗಿನ ವಚನಗಳು ಇಂಥ ಕಾಲದವುಗಳು. ಅವು ಯಾವವೆಂದರೆ:—

"ಎನಿಸೆನಿಸೆಂದರೆ ನಾ ಧೃತಿಗೆಡೆನಯ್ಯಾ। ಎಲುದೋರಿ ನರಹರಿದರೆ, ಕರುಳು ಕುಪ್ಪಳಿಸಿದರೆ ನಾ ಧೃತಿಗೆಡೆನಯ್ಯಾ। ಸಿರಹರಿದು ಅಟ್ಟೆ ನೆಲಕ್ಕೆ ಬಿದ್ದರೆ, ನಾಲಿಗೆ ಕೂಡಲಸಂಗ ಶರಣೆನುತಿದ್ದಿತಯ್ಯಾ॥"

"ಒಣಗಿಸಿ ಎನ್ನ ಘಣಘಣಲನೆ ಮಾಡಿದೆಡೆಯೂ, ಹರಣವುಳ್ಳನ್ನಕ್ಕ ನಿಮ್ಮ ಚರಣವ ನೆನೆಯುವುದ ಮಾಣೆ ಮಾಣೆ। ಶರಣೆಂಬುದ ಮಾಣೆ ಮಾಣೆ। ಕೂಡಲಸಂಗಮ ದೇವಯ್ಯಾ ಎನ್ನ ಹೆಣದ ಮೇಲೆ ಕಂಚಿಟ್ಟುಂಡಡೆಯೂ ಮಾಣೆಮಾಣೆನಯ್ಯಾ॥"

ವಿಚಿತ್ರವೇನು ನಡೆಯಿತೆಂದರೆ—ಯಾವದೋ ಒಂದು ಗುಪ್ತಶಕ್ತಿಯು, ಬೇಡವಾದ ವಿಷಯಗಳನ್ನು ಕೈಹಿಡಿದು ತರುಬಿ ಬಿಡಿಸುತ್ತಲೂ, ಬೇಕಾದ ವಿಷಯಗಳನ್ನು ಎಲ್ಲೆಲ್ಲಿನೆಂದರೂ ಕಟ್ಟಿ ಕೂಡಿಸಿ ಒತ್ತಾಯದಿಂದ ಬರೆಯಿಸುತ್ತಲೂ ಇದ್ದಹಾಗೆ ಪ್ರತಿದಿನವೂ ಅನುಭವಕ್ಕೆ ಬರಹತ್ತಿತು. ಇಂಥ ಒಂದಿಲ್ಲೊಂದು ಚಮತ್ಕಾರವು ನಡೆಯದ ದಿನವೇ ಇಲ್ಲ!* ಇದನ್ನು ನೋಡಿ ನಮ್ಮ ನಾಯಕನು ತನ್ನ ಗೆಳೆಯರಿಗೆಲ್ಲಾ ಹೇಳಹತ್ತಿದ್ದೇನೆಂದರೆ—'ಪುಸ್ತಕವು ಬರೆದು ಮುಗಿಯುವಷ್ಟರೊಳಗಾಗಿ ನನ್ನ ಅವಸ್ಥೆಯಲ್ಲಿ ಏನೋ ಬದಲಾವಣೆಯಾಗದೆ ಬಿಡಲಾರದೆಂದು ಇದರ ಮೇಲಿಂದ ನನಗೆ ತೋರುತ್ತದೆ!'

---

* ಇಂಥ ಅನುಭವವು ರತ್ನಾಕರಸಿದ್ಧನಿಗೂ ಬಂದಿದ್ದಿತೆಂದು ಆತನ ಈ ಕೆಳಗಿನ ಪದ್ಯಗಳಿಂದ ಅರಿಯಬಹುದು—

"ನಿಂದಲ್ಲಿ ನಡೆದಲ್ಲಿ ಕುಳಿತಲ್ಲಿ ಸರ್ವತ್ರ।
ಕುಂದದೆ ಕುಶಲ ಲೀಲೆಯೊಳು ॥
ಸಂದಿಸುವ ಭವ ನನ್ನೆದೆಯೊಳಗಿರು ಚಿದಾ-।
ನಂದ ಚಿದಂಬರ ಪುರುಷಾ ॥

ತೆರೆಯುಮೇಲ್ತೆರೆಗಳ ತೋರುವಿಂಗಡಲಂತೆ।
ಸಿರಿಯುಮೇಲ್ಸಿರಿಯು ಸೂಚಿಸುವ ॥
ಚರಿತಾರ್ಥ ನನ್ನಂತರಂಗದೊಳಿರು ಮನೋ-।
ಹರನೆ ಚಿದಂಬರ ಪುರುಷಾ ॥
ಕಾಣದರ್ಥವ ಕಾಣಿಸುವ ಪರಂಜ್ಯೋತಿ ನೀ!
ಮಾಣದೆ ನನ್ನೆದೆಯೆಂಬ ॥
ಕೋಣೆಯೊಳಿರು ಹೋದೆಯಾದರೆ ನಿನಗೆ ನಿ-।
ನ್ನಾಣೆ ಚಿದಂಬರ ಪುರುಷಾ ॥
ಬಿನ್ನಹ ಗುರುವೆ ಧ್ಯಾನಕೆ ಬೇಸರಾದಾಗ।
ನಿನ್ನನಾದಿಯ ಮಾಡಿಕೊಂಡು ॥
ಕನ್ನಡದೊಳಗೊಂದು ಕಥೆಯ ಪೇಳುವೆನದು।
ನಿನ್ನಾಜ್ಞೆ ಕಂಡ್ಯಾ ನನ್ನೊಡೆಯಾ ॥"

ಈ ಪುಸ್ತಕದಲ್ಲಿ ಆತನು ತನ್ನ ಆಧ್ಯಾತ್ಮಿಕ ಜೀವನದ 'ಅಂಧಂತಮಸ್ಸಿನ ತಗ್ಗಿ'ನ ಕಥೆಯನ್ನು ಬರೆಯತಕ್ಕವನಷ್ಟೆ? ಆದರೆ 'ತಮಸ್ಸನ್ನು ದಾಟಿಸಿಯೇ ಅದರ ವಿಷಯದಲ್ಲಿ ಬರೆಯಿಸಬೇಕೆಂದು ಈಶಸಂಕಲ್ಪವಿದ್ದಿರಬಹುದೆಂತಲೇ ಈಸು ದಿನ ಮುಂದಕ್ಕೆ ಬೀಳುತ್ತ ಬಂದಿರಬಹುದೇನು?' ಎಂದು ಆತನಿಗೆ ಈಗೊಂದು ವರುಷದಿಂದಲೂ ಒಳಗೊಳಗೆ ಬಲವಾಗಿ ಅನಿಸುತ್ತಿದ್ದಿತು. ಅದಕ್ಕೆ ಸರಿಯಾಗಿ ಈಗ ಲಕ್ಷಣಗಳೂ ತೋರಹತ್ತಿದವು. ಹೀಗೆ ದಿನಕ್ಕೊಂದರಂತೆ ಇಪ್ಪತ್ತೆರಡು ಪ್ರಕರಣಗಳು ಮುಗಿದವು. ಅಂದಿನ ರಾತ್ರಿ (ಸಪ್ಟಂಬರ ೧೪) ಅಂಡರ್ ಹಿಲ್ಲರ ಅನುಭಾವ ವಿದ್ಯೆಯೆಂಬ ಇಂಗ್ಲೀಷ ಗ್ರಂಥದೊಳಗಿನ 'ಕಾಳರಾತ್ರಿ'ಯೆಂಬ ಪ್ರಕರಣವನ್ನು ಓದುತ್ತಿದ್ದಹಾಗೆಯೇ ಒಂದು ಪುಟದೊಳಗೆ (೪೦೨) ಕಾಳ-ರಾತ್ರಿಯು ಹೇಗೆ ಹೇಗೆ ಕ್ರಮಕ್ರಮವಾಗಿ ಸರಿದುಹೋಗುವುದೆಂಬುದರ ವಿವರವು ಬಂತು. ಅದನ್ನು ನೋಡಿದ ಕೂಡಲೆಯೇ—'ಓಹೋ! ಒಂದೂವರೆ ವರುಷಕ್ಕೆ ಹಿಂದೆಯೇ ನನ್ನ ಅಂಧಂತಮಸ್ಸು ಹರಿದು ಬೆಳಗಾಗಹತ್ತಿದೆಯಲ್ಲಾ!' ಎಂದು ಅರಿತುಕೊಂಡು ಹಿಗ್ಗಿ ಉದ್ಗಾರವನ್ನು ತೆಗೆದನು!

ಮುಂದೆ ಮತ್ತೊಂದು ದಿನ '**ಯಾತ್ರಿಕನ ಪಯಣಗತಿ**' ಯೆಂಬ ಗ್ರಂಥವನ್ನೋದುತ್ತಿದ್ದಾಗ ಅದರೊಳಗಿನ ಮಹಾಯಾತ್ರಿಗೆ ಅಂಧಂತಮಸ್ಸಿನ ತಗ್ಗಿನಲ್ಲಿ ಎಲ್ಲಿಗೆ ಬೆಳಗಾಗುವದೆಂದು ಬರೆದಿದ್ದಿತೋ ಅಲ್ಲಿ ಆತನಿಗೆ ಏನೇನು ಕುರುಹುಗಳು ಕಂಡಿದ್ದವೋ ಅವೇ ನಮ್ಮ ನಾಯಕನಿಗೂ ಕಾಣಿಸಿರುವುದಾಗಿ ತಿಳಿಯಿತು. ಅದರಿಂದ ಆ ಮಾತು ಇನ್ನಿಷ್ಟು ಬಲಪಟ್ಟಿತು. ಅಲ್ಲದೆ ಆ ಗ್ರಂಥದಲ್ಲಿಯ ಯಾತ್ರಿಗೆ ಬೆಳಗಾದ ಮೇಲೆ ಬಲು ಬೇಗನೆಯೇ ಸೂರ್ಯೋದಯವಾಯಿತೆಂದು ಹೇಳಿದೆ. ದೇವನು ತನ್ನನ್ನು ಕಾಳರಾತ್ರಿಯೊಳಗಿಂದ ಪಾರುಮಾಡಿ ಬೆಳಗಿನ ಜಾವಕ್ಕೆ ತಂದು ಮುಟ್ಟಿಸಿದನಲ್ಲಾ! ಎಂಬ ಸಂತೋಷವು ಹೆಚ್ಚಿ ಆತನು ದೇವನನ್ನು ಅತಿಶಯವಾಗಿ ಕೊಂಡಾಡಹತ್ತುತ್ತಾನೆ. ಅಲ್ಲಿಗೆ ಸೂರ್ಯೋದಯವಾಗುತ್ತದೆ. ಇದರ ಮೇಲಿಂದ ಕಾಳರಾತ್ರಿಯು

ಕೊನೆಗೆ ಉಂಟಾಗುವ ಸೂರ್ಯೋದಯದ ಕಾಲದ ಕುರುಹುಗಳೆಂಥ ವೆಂಬುದು ತಿಳಿದಂತಾಗಲಿಲ್ಲವೆ?

ಅಂತೂ ಹೀಗೆ ಒಂದು ತಿಂಗಳಲ್ಲಿ ಮೂವತ್ತು ಪ್ರಕರಣಗಳಾದವು. ಆ ಮೇಲೆ ಮರುದಿನ ಬರೆಯಲಿಕ್ಕೆ ಕುಳಿತಾಗ ಮತ್ತೊಂದು ಸಂಗತಿಯು ವರ್ತಿಸಿತು. ಅದೇನೆಂದರೆ—ತಿಂಗಳಗಟ್ಟಲೆ ಬಹಳವಾಗಿ ಬರೆದದ್ದರಿಂದ ಈಗ ನಮ್ಮ ನಾಯಕನ ದೇಹವು ಬಹಳೇ ದಣಿದು ಬಿಟ್ಟಿತು. ಅದಕ್ಕೆ ನಡುವೆ ಒಂದಿಷ್ಟು ವಿಶ್ರಾಂತಿಯು ಅಗತ್ಯವುಂಟಾಯಿತು. ಆದರೆ ನಮ್ಮ ನಾಯಕನು—'ಒಮ್ಮೆ ಮುಗಿಸಿದ ಮೇಲೆಯೇ ಬೇಕಾದಷ್ಟು ವಿಶ್ರಾಂತಿಯನ್ನು ತೆಗೆದುಕೊಳ್ಳಬಹುದು' ಎಂದು ಬಗೆದಿದ್ದನು. ಆದರೆ ಇಂದು ಏನು ಮಾಡಿದರೂ ಬರವಣಿಗೆಗೆ ಕೈಯು ಏಳಲೇ ಒಲ್ಲದು. ಇದಿರಿಗೆ ಅರವಿಂದರ ಭಾವಚಿತ್ರ. ಅದನ್ನು ನೋಡಿದೊಡನೆ ಅರವಿಂದರ ಒಂದು ಪುಸ್ತಕದೊಳಗಿನ 'ಮೇಕ್ ನೋ ಕಂಡಿಶನ'–ಎಂಬ ಮಾತು ಬಳ್ಳೇ ಭರದಿಂದ ತಲೆಯಲ್ಲಿ ಓಡಾಡಹತ್ತಿತು. ಆದರೂ ಬರೆಯುವುದಕ್ಕೆ ಎಷ್ಟೋ ಹವಣಿಸಿದನು. ಆದರೆ 'Make no condition' 'ಕರಾರು ಅಥವಾ ಶರ್ತು ಹಾಕಬೇಡ' ಎಂಬ ಮಾತು ಮತ್ತೆ ಮತ್ತೆ ಹೆಚ್ಚು ಹೆಚ್ಚಾಗಿಯೇ ಮುಂದೆ ಬಂದು ನಿಲ್ಲಹತ್ತಿತು! ಆಯಿತು–ನಕ್ಕು ಬರವಣಿಗೆಯ ಕುರ್ಚಿಯಿಂದ ಕೆಳಗಿಳಿದನು. ಕೂಡಲೆ ತಲೆಯೊಳಗೆ ನಡೆದಿದ್ದ ಚಿತ್ರವಿಚಿತ್ರವಾದ ಗಲಿಬಿಲಿಯೆಲ್ಲಾ ಪುಟ್ಟಮರೆಯಾಗಿ ಹೋಯಿತು * 'ಮೇಕ್ ನೋ ಕಂಡಿಶನ್' ಎಂಬದು ಕಾಣಲಿಕ್ಕೆ ಬಹಳ ಚಿಕ್ಕ ವಾಕ್ಯವಾಗಿದೆಯಾದರೂ ಅರವಿಂದರ ಪೂರ್ಣಯೋಗದಲ್ಲಿ ಅದು ಬಹಳೇ ದೊಡ್ಡ ಮಾತು! ಅಂಥಾ ದೊಡ್ಡ ವಿಷಯವು

---

* ಕ್ರಿಸ್ತದೇವನ ಈ ಕೆಳಗಿನ ವಚನವು ಸಮರ್ಪಣ ಯೋಗಿಗಳಿಗೆ ಬರತಕ್ಕ ಇಂತಹ ಅನುಭವವನ್ನೇ ಕುರಿತುದಾಗಿದೆ—

"ಏನು ಮಾತನಾಡುವಿ, ಎಂತು ಮಾತನಾಡುವಿ ಇದನ್ನು ಯೋಚಿಸಬೇಡ; ಆಡಬೇಕಾದ ಹೊತ್ತಿಗೆ ಸರಿಯಾಗಿ ಕೊಡುವ ಮಾತು ಕೊಡಲಾದೀತು. ಯಾಕೆಂದರೆ ಮಾತನಾಡುವವನು ನೀನಲ್ಲ, ನಿನ್ನ ತಂದೆಯ ಆತ್ಮವು ನಿನ್ನ ಮುಖಾಂತರ ಆಡುವದು ...... ದಿವ್ಯ ರಾಜ್ಯವು ನಿನ್ನೊಳಗಿದೆ.

ಇಂದು ಸಹಜವಾಗಿ ಒಂದು ಚಿಕ್ಕ ಘಟನೆಯೊಳಗಿಂದ ಹಾದು ನಮ್ಮ ನಾಯಕನ ಪದರಿಗೆ ಬಿತ್ತು! ಅದನ್ನುಳಿದರೆ ಸಮರ್ಪಣವೆಂಬುದು ಮೂಗಿಲ್ಲದ ಮೊಗದಂತೆ! ಸಮರ್ಪಣದ ಮುಖ್ಯ ರಹಸ್ಯವೇ ಅದರಲ್ಲಿದೆ.

ಮುಂದೆ ಮೂರು ದಿನ ವಿಶ್ರಾಂತಿ. ಆಮೇಲೆ ದೇಹಕ್ಕೆ ಮತ್ತೆ ಹೊಸ ಹುರುಪು. ಅಲ್ಲಿಂದ ಮೂರು ದಿನ ಬರವಣಿಗೆ. ಮತ್ತೆ ಒಂದು ದಿನ ವಿಶ್ರಾಂತಿ ಬಳಿಕ ಮೂರು ದಿನ ಬರವಣಿಗೆಯು ಸಾಗಿ—ಯೋಗೀಶ್ವರರಾದ ಅರವಿಂದರ ಜನ್ಮತಾರೀಖಿಗೆ ನಿರ್ಧರಿಸಲ್ಪಟ್ಟ ಪುಸ್ತಕವು ಮಹಾ ಅನುಭಾವಿಗಳಾದ ಮಹಾತ್ಮಾಗಾಂಧಿಯವರ ಜನ್ಮತಾರೀಖಿಗೆ (ಅಕ್ಟೋಬರ್ ೨) ಕೊನೆಗಂಡಿತು!!! ಓಂ ಶ್ರೀ ಓಂ!!!

ಪ್ರಸ್ತುತ ಲೇಖಕನಾದ ನಾನು ನಮ್ಮ ನಾಯಕನ ಆ ಗುಪ್ತಶಕ್ತಿ ಪ್ರಚೋದಿತ ಗ್ರಂಥವನ್ನೇ ಪ್ರತಿಮಾಡಿ ವಾಚಕರ ಇದಿರಿಗೆ ಇಟ್ಟಿದ್ದೇನೆ. ವಾಚಕರು ಅದರೊಳಗಿಂದ ಏನೇನು ಆರಿಸಿಕೊಳ್ಳುವರೋ ನೋಡುವಾ!!! ಓಂ ಶಾನ್ತಿ ಶಾನ್ತಿ ಶಾನ್ತಿ!!!

---

ಅರವಿಂದರ ಈ ಮುಂದಿನ ವಾಕ್ಯವೂ ಇಂತಹ ಅವಸ್ಥೆಯನ್ನೇ ಕುರಿತುದಾಗಿದೆ—

"ನಿನ್ನಭಕ್ತಿ ಯೋಗಗಳ ನಿರ್ಭರಶಕ್ತಿಯಿಂದ ದಿವ್ಯಶಕ್ತಿಮಾತೆಯೊಡನೆ ನೀನು ಸಲಿಗೆ ಹೊಂದಿದೆಯೆಂದರೆ ಯಾವ ಕಾಲಕ್ಕೂ ನೀನು ಏಕಾಗ್ರನಾಗಿ ಅವಳ ನಾಯಕತ್ವವನ್ನು ಕೋರಿದೊಡನೆ, ಅವಳ ಆದೇಶ, ಪ್ರೇರಣೆ ಪಡೆದು ಮಾಡುವ ಕೆಲಸ, ಮಾಡಬೇಕಾದ ರೀತಿ, ಪಡೆಯಬೇಕಾದ ಫಲ ಎಲ್ಲವೂ ತಾನೇ ಸ್ಪಷ್ಟವಾಗಿ ಸೂಚಿತವಾಗುವದು."

# HOPE

I can never believe that
you are lost to us, my king,
though our poverty is great
and deep our shame.

Your will works behind the
veil of despair,
and in your own time opens
the gate of the impossible.

You come like unto your own
house in the unprepared hall
and on the
unexpected day

Dark ruins at your touch
become like a bud
in whose bosom grows unseen
the flower of fulfilment.

Therefore I still have hope,
not that the wrecks
will be mended, but
a new world will arise.

—*Rabindranath Tagore.*

**Om**

---

# ನಮ್ಮ ಗ್ರಂಥ ಮಾಲೆಯ

## ಹಿ ತೈ ಷಿ ಗ ಳು

೧ ಶ್ರೀಮತ್ ಶಾಂತವೀರ ಸ್ವಾಮಿಗಳು ಬಬಲೇಶ್ವರ
೨ ,, ಸಂಗನಬಸವ ಸ್ವಾಮಿಗಳು ಬಂಥನಾಳ
೩ ಮಾಧವದಾಸಜಿ ಸಾಧೂ ಮಹಾರಾಜ ಪಂಢರಪೂರ
೪ ಶ್ರೀ ಗುರುಪಾದೇಶ್ವರ ತತ್ವಜ್ಞಾನ ಮಂದಿರ ಮ್ಯೆಂದರಗಿ
೫ ವಿಜಾಪುರದ ಸಾಹಿತ್ಯಾಭಿಮಾನಿ ಧನಿಕ ಮಹಾಶಯರೊಬ್ಬರು
೬ ಶ್ರೀಮಂತ ಬಾಬಾಸಾಹೇಬ ಸರದೇಸಾಯರು ರಕ್ಕಸಗಿ–
ವಿಜಾಪುರ
೭ ಶ್ರೀ. ಸಕ್ಕರೀ ಬಂಧುಗಳು ಇಲಕಲ್ಲ
೮ ಶ್ರೀಮಾನ್ ಹ. ಬ. ಕೋಣ್ಣೂರ ಎಮ್. ಎ. ವಿಜಾಪುರ
೯ ಜ್ಞಾನೋದಯ ನಾಟಕ ಮಂಡಳಿಯ ಒಡೆಯರಾದ
ಆರ್. ಜಿ. ಹೋಳಗಿಯವರು ಹಂದಿಗನೂರು
೧೦ ಶ್ರೀಮಂತ ರಾಮರಾವ ಚಿಂತಾಮಣಿ ನಾಡಗೌಡರು ಹಲಸಂಗಿ
೧೧ ಶ್ರೀ. ಸರಸಂಬಿ ಶಿವಲಿಂಗಪ್ಪನವರು ಚಡಚಣ

## ಹೊಸ ವರ್ಷದ

# ನಮ್ಮ ಸಹಾಯಕರು

೧ ಶಿಕ್ಷಕರ ಸಹಕಾರಿ ಸಂಘ ತಾಲೂಕ ಇಂಡಿ ೨೦
೨ ಶ್ರೀ. ದೊಡ್ಡಮೇಟಿ ಅಂದಾನೆಪ್ಪನವರು ಜಕ್ಕಲಿ M. L. A. ೧೫
೩ ,, ಎನ್. ವ್ಹಿ. ಕುಲಕರ್ಣಿ ಸ್ಟೇಷನ್ ಮಾಸ್ತರರು ನಾಸಿಕ
೪ ,, ತಂಬಾಕೆ ಸಿದ್ಧರಾಮಪ್ಪನವರು ತಾಳೀಕೋಟಿ
೫ ,, ಶಿಕ್ಷಕರ ಸಹಕಾರಿ ಸಂಘ ತಾಲೂಕ ಬಾಗೇವಾಡಿ ೧೦
೬ ,, ಲಿಂಗಪ್ಪ ಬಸಪ್ಪ ದೇಸಾನಿ ಅ। ಮಾಸ್ತರರು ನಾಲತವಾಡ ೧೦
೭ ,, ಎನ್. ಜಿ. ಎಮ್. ೮॥
೮ ,, ಬಿ. ಗುರುಸಿದ್ದಣ್ಣ ಭಾರತ ವ್ಯಾಯಾಮಶಾಲೆ ಕೊಟ್ಟೂರ ೫
೯ ,, ಮುಡಿವಾಳಪ್ಪ & ಬ್ರದರ್ಸ ಶಿವಾನಂದ ಪ್ರೆಸ್ ಗದಗ ೫
೧೦ ,, ಎಸ್. ವ್ಹಿ. ಅಡ್ಡಣಗಿ ಬಿ. ಎ. ಎಲ್‌ಎಲ್. ಬಿ. ಬೆಳಗಾಂವ ೫
೧೧ ಡಾ. ಪಿ. ಪಿ. ಹಳೀಮನಿ M. B. B. S. (ಮುಂಬಯಿ) L R. C.P. (ಲಂಡನ) M. R. C. S. (ಇಂಗ್ಲಂಡ) ಹುಬ್ಬಳ್ಳಿ ೫
೧೨ ಶ್ರೀ. ಆರ್. ಎಚ್ ಕುಲಕರ್ಣಿ B. A. LL. B. ವಕೀಲರು ವಿಜಾಪುರ ೫
೧೩ ,, ಎಮ್. ಬಿ. ಕೋರಬು ಡಿ. ಸ್ಕೂಲಬೋರ್ಡ ಸುಪರವಾಯಜರರು ವಿಜಾಪೂರ ೫
೧೪ ,, ಜಿ. ಎಸ್. ಕಂಬಳಿ ಎಕ್ಸಾಯಿಜ್ ಇನಸ್ಪೇಕ್ಟರರು ಬಾಗಲಕೋಟಿ ೫
೧೫ ಡಾ. ಸ್ವಾಮಿ ಚಂದ್ರಶೇಕರಶಾಸ್ತ್ರಿಗಳು ಇಲಕಲ್ಲ ೫
೧೬ ಶ್ರೀ. ರಾಮಪ್ಪ ಲಕ್ಷ್ಮಣಪ್ಪ ಚಿಕ್ಕೋಡಿ ಜ. ಮರ್ಚಂಟ ರಬಕವಿ ೫
೧೭ ,, ಬಸವಂತಪ್ಪ ದೊಡ್ಡಪ್ಪ ಫತ್ತೇಪೂರ ಜ. ಮರ್ಚಂಟ ಬದಾಮಿ ೫

*

೧೮ ,, ಏಸ್. ಎಸ್. ಹಿರೇಮಠ B. A. ಯುನಿಯನ್
ಸುಪರ್‌ವಾಯ್‌ಜರರು ಗದಗ ೫
೧೯ ,, ಹಾರನಹಳ್ಳಿ ಮಾಸ್ತರರು M. A. ಗ। ಹೈಸ್ಕೂಲ ಏಜಾಪುರ ೫
೨೦ ,, ಜಿ. ಎಲ್. ವೈದ್ಯ ಆಡಿಟರ ಕೊ. ಆ. ಸೋಸಾಯಟಿ
ಆಫೀಸ ವಿಜಾಪೂರ ೫
೨೧ ,, ಆರ್. ಬಿ. ಆಲಭಾಳ B. A. ಡಿ. ಸ್ಕೂಲಬೋರ್ಡ
ಸುಪರವಾಯ್‌ಝರ್ ವಿಜಾಪುರ ೫
೨೨ ,, ಬಿ. ಪಿ. ಹಿರೇಮಠ ಯುನಿಯನ್ ಮ್ಯಾನೇಜರರು ಬದಾಮಿ ೫
೨೩ ,, ಎಂ. ಬಿ. ಕಿಣಗಿ ಮಾಲಕರಿ ಕಚೇರಿ ಬೀಳಗಿ ೫
೨೪ ,, ಟಿ. ಎಂ. ಹಾಳಕೇರಿ ಅ। ಮಾಸ್ತರರು ಬದಾಮಿ ೫
೨೫ ,, ತಿ. ವೆ. ಕುಲಕರ್ಣಿ ಹೆ। ಮಾಸ್ತರರು ಸಾಲವಡಗಿ ೫
೨೬ ,, ಲಿಂಗಪ್ಪ ಶಿವೂರ ಆಥಗಾರ್ ೫
೨೭ ,, ಲಕ್ಷ್ಮಣ ಭೀಮರಾವ ಗುಮಾಸ್ತೆ ಹೆ। ಮಾಸ್ತರರು
ರೇವತಗಾಂವ ೫
೨೮ ,, ಗುರುನಾಥ ಅಪ್ಪಾಜಿ ಕುಲಕರ್ಣಿ ಹೆ। ಮಾಸ್ತರರು
ಅಗರಖೇಡ ೫
೨೯ ,, ಸಿದ್ದಪ್ಪ ಬಸಪ್ಪ ಜಮಖಂಡಿ ಹೆ। ಮಾಸ್ತರರು ಭತ್ತಗುಣಿಕಿ ೫
೩೦ ,, ನಾರಾಯಣ ಗುಂಡಾಚಾರ್ಯ ಆದ್ಯ ಹೆ। ಮಾಸ್ತರರು
ಏರಗಿ ೫
೩೧ ,, ಬಿ. ಎಸ್. ಬ್ಯಾಳಿ ಅ। ಮಾಸ್ತರರು ಕೆಲವಡಿ ೫
೩೨ ,, ರೇವಣಸಿದ್ಧಪ್ಪ ಸಂಗಪ್ಪ ಮದಭಾವಿ ಹಲಸಂಗಿ ೫
೩೩ ,, ಗುರುಬಾಳಪ್ಪ ಸದಾಶಿವಪ್ಪ ಜೀರಂಕಲಗಿ ಚಡಚಣ ೫
೩೪ ,, ಜಿ. ಬಿ. ಪಿ. ೫

---



---